11. ಗುತ್ತಿಗೆದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.
12. ಇ.ಎಂ.ಡಿ. ಹಣವನ್ನು ಯಶಸ್ವಿಯಲ್ಲದ ಟೆಂಡರ್‌ದಾರರಿಗೆ ಟೆಂಡರ್ ಕ್ರಮ ಮುಗಿದ ನಂತರ ಚೆಕ್ ಮೂಲಕ ಹಿಂತಿರುಗಿಸಲಾಗುವುದು.
13. ಯಶಸ್ವಿ ಟೆಂಡರ್‌ದಾರರಿಂದ ಇ.ಎಂ.ಡಿ. ಜೊತೆಯಲ್ಲಿ ಶೇಕಡಾ 10% ರಷ್ಟನ್ನು ಅವರ ಬಿಲ್ಲುಗಳಲ್ಲಿ ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ಅವರಿಗೆ ಒಪ್ಪಿಸಿದ ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಹಾಗೂ ಅಂತಿಮ ಬಿಲ್ ಪಾವತಿಯಾದ ಆರು ತಿಂಗಳ ನಂತರ ಹಿಂದಿರುಗಿಸಲಾಗುವುದು.
14. ಪ್ರತಿ ಬಿಲ್‌ನಲ್ಲಿ ಶೇಕಡಾ 2% ರಷ್ಟನ್ನು ಆದಾಯ ತೆರಿಗೆ ಹಾಗೂ ಅದರ ಮೇಲೆ ಚಾಲ್ತಿಯಲ್ಲಿರುವ ಸರ್ಚಾಜನ್ನು ಮತ್ತು ಶೇಕಡಾ 5% ರಷ್ಟನ್ನು ಮಾರಾಟ ತೆರಿಗೆಯಾಗಿ ನಿಯಮಾನುಸಾರ ಹಿಡಿಯಲಾಗುವುದು.
15. ಈ ಗುತ್ತಿಗೆಯ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ವೃತ್ತ, ಬೆಂಗಳೂರು ಇವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.
16. ಟೆಂಡರ್‌ದಾರರು ಅಂದಾಜು ಪಟ್ಟಿಯಲ್ಲಿ ನಮೂದಿಸಿರುವ ದರಗಳಿಗೆ ಪಿ.ಡಬ್ಲ್ಯೂ.ಡಿ. 2006-07ನೇ ಸಾಲಿನ ದರಕ್ಕಿಂತ ಎಷ್ಟು ಹೆಚ್ಚು ಅಥವಾ ಕಡಿಮೆ ಎಂಬುದನ್ನು ನಮೂದಿಸಬೇಕು.
17. ಕೆಲಸದ ಆದೇಶ ನೀಡಿದ ದಿನಾಂಕದಿಂದ ಆರು ತಿಂಗಳೊಳಗೆ ಕೆಲಸವನ್ನು ಪೂರೈಸತಕ್ಕದ್ದು.
18. ಇತರೆ ಇಲಾಖೆಗಳಿಂದ ಅಂದರೆ ಕೆ.ಇ.ಬಿ. ಒಳಚರಂಡಿ ನಗರ ಪಾಲಿಕೆ ಇಲಾಖೆಯಿಂದ ಕಟ್ಟಡದ ಕಾರ್ಯದ ಸಲುವಾಗಿ ಅನುಮತಿಯನ್ನು ಟೆಂಡರ್‌ದಾರರೇ ಅರ್ಜಿ ನೀಡಿ ಪಡೆಯತಕ್ಕದ್ದು.
19. ಟೆಂಡರ್‌ದಾರರ ವತಿಯಿಂದ ನೇಮಿಸತಕ್ಕ ಕೆಲಸಗಾರರ ವಿವರಗಳನ್ನು ಈ ಕಛೇರಿಗೆ ನೀಡತಕ್ಕದ್ದು ಮತ್ತು ಕಟ್ಟಡ ಕೆಲಸದ ಅವಧಿಯಲ್ಲಿ ಯಾವುದೇ ವಿಧವಾದ ಆಸ್ತಿ ನಷ್ಟ ಸಂಭವಿಸಿದ್ದಲ್ಲಿ ಸಂಬಂಧಪಟ್ಟ ಗುತ್ತಿಗೆದಾರರೇ ಹೊಣೆಗಾರರಾಗುತ್ತಾರೆ.
20. ಕೆಲಸವನ್ನು ತೃಪ್ತಿಕರವಾಗಿ ಪೂರೈಸಿದ ನಂತರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಪರಿಶೀಲಿಸಿ ಪ್ರಮಾಣೀಕರಿಸಿದ ನಂತರ ಬಿಲ್ಲಿನ ಹಣ ಪಾವತಿಸಲಾಗುವುದು.
21. ಟೆಂಡರ್‌ದಾರರು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ವ್ಯಕ್ತಿಗಳನ್ನು ಕೆಲಸಕ್ಕೆ ನಿಯೋಜಿಸಬಾರದು.
22. ಉಪ ಅರಣ್ಯ ಸಂರಕ್ಷಣಾಧಿಕಾರಿ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿ ಅಥವಾ ಪ್ರತಿನಿಧಿ ಸದರಿ ಕೆಲಸವನ್ನು ಅವರು ನೋಡಬಯಸಿದ್ದಲ್ಲಿ ಅದಕ್ಕೆ ಅನುವು ಮಾಡಿಕೊಡಬೇಕು.
23. ಸಾರ್ವತ್ರಿಕ ರಜೆ ದಿನಗಳಲ್ಲಿ ಕೆಲಸ ಮಾಡಬೇಕಾದರೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಅನುಮತಿಯನ್ನು ಬರವಣಿಗೆಯಲ್ಲಿ ಪಡೆಯತಕ್ಕದ್ದು.
24. ಟೆಂಡರ್‌ದಾರರು ನಿರ್ವಹಿಸಿದ ಕೆಲಸಗಳ ಪೈಕಿ ಕಟ್ಟಡದ ಯಾವುದೇ ಕೆಲಸ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ತೃಪ್ತಿಕರವಾಗದೇ ಇದ್ದಲ್ಲಿ ಆ ಕೆಲಸಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ತೀರ್ಮಾನದಂತೆ ಹಣ ಪಾವತಿ ಮಾಡಲಾಗುವುದು.
25. ಕೆಲಸಗಳು ಮುಗಿದ ನಂತರ ಅದರ ಅಳತೆಯನ್ನು ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸಿರುವ ಮಾಪನ ಪದ್ಧತಿಯ ರೀತ್ಯ ಮಾಡಲಾಗುವುದು.
26. ಕೆಲಸದ ಆದೇಶ ನೀಡಿದ ದಿನದಿಂದ ಕರಾರು ಪತ್ರದಲ್ಲಿ ನಿಗದಿಪಡಿಸಿದ ಅವಧಿಯೊಳಗೆ ಕೆಲಸವನ್ನು ಮುಗಿಸದೆ ಇದ್ದ ಪಕ್ಷದಲ್ಲಿ ಅಂದಾಜು ವೆಚ್ಚದ ಶೇಕಡಾ ಒಂದರಷ್ಟನ್ನು ಅಥವಾ ಅರಣ್ಯ ಸಂರಕ್ಷಣಾಧಿಕಾರಿಗಳು/ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗದಿಪಡಿಸಿದ ಮೊತ್ತವನ್ನು ದಂಡವಾಗಿ ಕಟ್ಟಬೇಕಾಗುತ್ತದೆ.
27. ಈ ಕೆಲಸ ಕೈಗೊಳ್ಳುವಾಗ ಟೆಂಡರುದಾರರಿಂದ ಇಲಾಖೆಗೆ ಯಾವುದಾದರೂ ಪರಿಹಾರ/ ದಂಡ ಬಾಕಿ ಬರಬೇಕಾಗಿದ್ದಲ್ಲಿ ಅದನ್ನು ಅವರ ಹೆಸರಿನಲ್ಲಿರುವ ಭದ್ರತಾ ಠೇವಣಿಯಲ್ಲಿ ಮುರಿದುಕೊಳ್ಳಲಾಗುವುದು.
28. ಟೆಂಡರ್‌ದಾರರು ನಿಗದಿತ ಅವಧಿಯಲ್ಲಿ ಕೆಲಸವನ್ನು ಪೂರೈಸದೆ ಅಪೂರ್ಣ ಸ್ಥಿತಿಯಲ್ಲಿ ಬಿಟ್ಟುಹೋದ ಪಕ್ಷದಲ್ಲಿ ಸದರಿ ಕೆಲಸವನ್ನು ಟೆಂಡರುದಾರರ ಸ್ವಂತ ಜವಾಬ್ದಾರಿ ಮತ್ತು ವೆಚ್ಚದಲ್ಲಿ ಇಲಾಖಾವತಿಯಿಂದ ಮಾಡಿಸಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಂಪೂರ್ಣ ಹಕ್ಕು ಇರುತ್ತದೆ. ಮತ್ತು ಈ ಸಂಬಂಧ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಕೆಲಸದ ಬಗ್ಗೆ ನೀಡಿದ ದೃಢೀಕರಣ ಪತ್ರವೇ ಅಂತಿಮವಾಗಿರುತ್ತದೆ.
29. ಬಿಲ್ಲುಗಳನ್ನು ಪಾವತಿಗೆ ಸಲ್ಲಿಸುವಾಗ ನಿಗದಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
30. ಟೆಂಡರ್‌ದಾರರಿಗೆ ನೀಡಲಾದ ಮಾದರಿ ಮತ್ತು ವಿವರಣೆಯಲ್ಲಿ ಬದಲಾವಣೆಗಳನ್ನು ಮಾಡಲು ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಅಧಿಕಾರವಿರುತ್ತದೆ. ಈ ಬದಲಾವಣೆಗಳಿಂದ ಕರಾರು ಒಪ್ಪಂದ ಅನೂರ್ಜಿತಗೊಳ್ಳುವುದಿಲ್ಲ.
31. ಕೆಲಸದಲ್ಲಿ ಏನಾದರೂ ಬದಲಾವಣೆ ಮಿತಿಗೊಳಿಸಿದಲ್ಲಿ ಟೆಂಡರುದಾರರು ಕ್ಲೈಮ್ ಮಾಡಬಹುದಾದ ಯಾವುದೇ ರೀತಿಯ ಪರಿಹಾರವನ್ನು ನೀಡಲು ಇಲಾಖೆ ಬದ್ಧವಾಗಿರುವುದಿಲ್ಲ.
32. ಕೆಲಸದ ಅವಧಿಯ ವಿಸ್ತರಣೆ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ನೀಡಿದ ಆದೇಶವೇ ಅಂತಿಮವಾಗಿದ್ದು ಇದನ್ನು ಎಲ್ಲಾ ಟೆಂಡರುದಾರರು ಒಪ್ಪಿಕೊಳ್ಳಲು ಬದ್ಧರಾಗಿರುತ್ತಾರೆ.
33. ಟೆಂಡರುದಾರರು ನಿರ್ವಹಿಸಿದ ಕೆಲಸದ ಗುಣಮಟ್ಟ ಕಳಪೆಯಾಗಿದ್ದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ನಿಗದಿಪಡಿಸುವ ದಂಡವನ್ನು ಕಟ್ಟಬೇಕು. ಹಾಗೂ ಸದರಿ ಕೆಲಸವನ್ನು ಟೆಂಡರುದಾರರ ವೆಚ್ಚದಲ್ಲಿ ಸರಿಪಡಿಸಬೇಕು.
34. ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರ ಪೂರ್ವಾನುಮತಿ ಇಲ್ಲದೆ ಬೇರೆಯವರಿಗೆ ಗುತ್ತಿಗೆದಾರರು ವಹಿಸಿಕೊಟ್ಟಲ್ಲಿ ಕೆಲಸದ ಆದೇಶವನ್ನು ರದ್ದುಪಡಿಸುವುದಲ್ಲದೆ ಇಎಂಡಿ ಮತ್ತು ಭದ್ರತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
35. ಕೆಲಸದ ಅವಧಿಯಲ್ಲಿ ಗುತ್ತಿಗೆದಾರರು ನೇಮಿಸಿಕೊಂಡ ಕೆಲಸಗಾರರಿಗೆ ಏನಾದರೂ ಪೆಟ್ಟು ಬಿದ್ದಲ್ಲಿ ಅಥವಾ ಆಕಸ್ಮಿಕ ಸಂಭವಿಸಿದ್ದಲ್ಲಿ ಅವರ ಚಿಕಿತ್ಸಾ ವೆಚ್ಚವನ್ನು ಟೆಂಡರುದಾರರೇ ಭರಿಸಬೇಕು. ಒಂದು ವೇಳೆ ಈ ವೆಚ್ಚವನ್ನು ಭರಿಸದಿದ್ದಲ್ಲಿ ಟೆಂಡರುದಾರರಿಗೆ ನೀಡಬೇಕಾದ ಬಿಲ್ಲಿನ ಹಣದಲ್ಲಿ ಸದರಿ ಮೊತ್ತವನ್ನು ಮುರಿದುಕೊಳ್ಳಲಾಗುವುದು.
36. ಕೆಲಸದ ಪ್ರದೇಶದಲ್ಲಿ ಕೆಲಸ ನಿರ್ವಹಿಸಿದ ಕೆಲಸಗಾರರ ಸುರಕ್ಷತೆಗೆ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

37. ಕೆಲಸ ಪ್ರಾರಂಭಿಸಿದ್ದಲ್ಲಿ ಇಲಾಖಾ ವತಿಯಿಂದ ಯಾವುದೇ ವಿಳಂಬವಾದಲ್ಲಿ ಟೆಂಡರುದಾರರಿಗೆ ಈ ಸಂಬಂಧ ಯಾವುದೇ ಪರಿಹಾರ ನೀಡಲಾಗುವುದಿಲ್ಲ.
38. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
39. ಬಿಲ್ಲಿನ ಹಣವನ್ನು ಯಶಸ್ವಿ ಟೆಂಡರುದಾರರಿಗೆ ಪೂರ್ಣಗೊಂಡ ಕೆಲಸಕ್ಕೆ ಚೆಕ್ ಮೂಲಕ ನೀಡಲಾಗುವುದು.
40. ಟೆಂಡರುದಾರರು ನಮೂದಿಸುವ ದರವು ನಿಯಮಾವಳಿಗಳ ಪ್ರಕಾರ ಮಾರಾಟ ತೆರಿಗೆ ದರವನ್ನು ಒಳಗೊಂಡಿರಬೇಕು. ಈ ಬಗ್ಗೆ ಗುತ್ತಿಗೆದಾರರಿಗೆ ಯಾವುದೇ ಹೆಚ್ಚುವರಿ ಹಣ ನೀಡಲಾಗುವುದಿಲ್ಲ.
41. ಮೇಲೆ ಹೇಳಿದ ಟೆಂಡರ್ ನಿಯಮಗಳಿಗೆ ಒಪ್ಪದೇ ಇದ್ದ ಟೆಂಡರುದಾರರ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
42. ಯಶಸ್ವಿ ಟೆಂಡರುದಾರರು ನಮೂದಿಸಿರುವ ದರದಲ್ಲಿ ಯಾವುದೇ ಕಾರಣದಿಂದ ಅಂದರೆ ಕಾಲ ಹೆಚ್ಚಳ ಹೊಸದರಪಟ್ಟಿಯ ಪ್ರಕಟಣೆ ಮುಂತಾದವು ಅಥವಾ ಇನ್ನಾವುದೇ ಕಾರಣದಿಂದ ಅವಧಿ ವಿಸ್ತರಣೆಯಿಂದಲೂ ನಮೂದಿಸಿದ ದರಕ್ಕಿಂತ ಹೆಚ್ಚು ಮಾಡಲಾಗುವುದಿಲ್ಲ.
43. ಕಾರಣಾಂತರಗಳಿಂದ ಯಾವುದೇ ಕೆಲಸವನ್ನು ಪೂರ್ಣವಾಗಿ ನಿಲ್ಲಿಸಬೇಕಾದಲ್ಲಿ ಅಂತಹ ಗುತ್ತಿಗೆದಾರರಿಗೆ ಇ.ಎಂ.ಡಿ. ಹಣವನ್ನು ಮಾತ್ರ ಹಿಂದಿರುಗಿಸಲಾಗುತ್ತದೆ. ಮತ್ತು ಈ ಬಗ್ಗೆ ಯಾವುದೇ ರೀತಿಯ ಪರಿಹಾರ ನೀಡಲಾಗುವುದಿಲ್ಲ.
44. ನಮೂದಿಸಿರುವ ದರವು ಕೆಲಸದ ಸ್ಥಳದ ಸ್ವಚ್ಛ ಮಾಡುವಿಕೆ ಒಳಗೊಂಡಿರಬೇಕು ಮತ್ತು ಈ ದರದಲ್ಲಿ ಎಲ್ಲಾ ಋತುಮಾನ ಭೂಮಿಯ ಪರಿಸ್ಥಿತಿಗಳಲ್ಲೂ ಕೆಲಸ ಮಾಡಬೇಕು.
45. ಪಿಡಬ್ಲ್ಯೂಡಿ ದರಪಟ್ಟಿಯಲ್ಲಿ ನಮೂದಿಸಿರುವಂತೆ ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರ ಕಟ್ಟಡದ ಕೆಲಸಕ್ಕೆ ಉಪಯೋಗಿಸಬೇಕು.
46. ಕೆಲಸದ ಜಾಗದಲ್ಲಿ ಶೌಚಾಲಯದ ವ್ಯವಸ್ಥೆಯನ್ನು ಕಾರ್ಮಿಕರಿಗೆ ಮಾಡಿಕೊಡುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ.
47. ನಮೂದಿಸಿದ ದರಗಳಲ್ಲಿ ಸಾಮಗ್ರಿಗಳ ಬೆಲೆ ಮತ್ತು ಸಾಗಾಣಿಕೆ ವೆಚ್ಚ ಸೇರಿರುತ್ತದೆ ಎಂದು ತಿಳಿಯಲಾಗುವುದು.
48. ಉತ್ತಮ ಗುಣಮಟ್ಟದ ಸಾಮಗ್ರಿಗಳನ್ನು ಮಾತ್ರವೇ ಕೆಲಸದ ಸ್ಥಳಗಳಲ್ಲಿ ದಾಸ್ತಾನು ಮಾಡಬೇಕು. ತಿರಸ್ಕೃತವಾದ ಸಾಮಗ್ರಿಗಳನ್ನು ಕೆಲಸದ ಪ್ರದೇಶದಿಂದ ಕೂಡಲೇ ಸಾಗಿಸಬೇಕು.
49. ಕೆಲಸದ ಸ್ಥಳದಿಂದ ಅನುಪಯೋಗಿ ವಸ್ತುಗಳನ್ನು ಗುತ್ತಿಗೆದಾರರು ತೆಗೆಯದಿದ್ದಲ್ಲಿ ಅಂದಾಜು ವೆಚ್ಚದ ಮೇಲೆ ಶೇಕಡಾ 0.5ನ್ನು ಬಿಲ್ಲುಗಳನ್ನು ಕಡಿತಗೊಳಿಸಲಾಗುವುದು.
50. ಟೆಂಡರುದಾರರು ನಮೂದಿಸಿರುವ ದರಗಳು ಕೆಲಸ ಮಾಡುವ ಸ್ಥಳದಲ್ಲಿ ಕೆಲಸ ಪ್ರಾರಂಭಿಸುವ ಮುನ್ನಾ ಸದರಿ ಪ್ರದೇಶವನ್ನು ಸಮತಟ್ಟಾಗಿಸುವ ಕೆಲಸವು ಸೇರಿರುತ್ತದೆ ಎಂದು ತಿಳಿಯುವುದು.
51. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.
52. ಷೆಡ್ಯೂಲ್‌ನಲ್ಲಿರುವ ಅಂದಾಜು ವೆಚ್ಚವು ಲೋಕೋಪಯೋಗಿ ಇಲಾಖೆಯ 2006-07ನೇ ಸಾಲಿನ ಬೆಂಗಳೂರು ವೃತ್ತದ (ಷೆಡ್ಯೂಲ್ ದರ) ಮಂಜೂರಾದ ದರದಲ್ಲಿರುತ್ತದೆ. ಕಟ್ಟಡಗಳ ಅಂದಾಜು ವೆಚ್ಚವನ್ನು 2006-07ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಷೆಡ್ಯೂಲ್ ದರದಲ್ಲಿ ಮಂಜೂರು ಮಾಡಲ್ಪಟ್ಟಿರುತ್ತದೆ. ಯಾವುದೇ ಕಾರಣದಿಂದ ಸದರಿ ಕೆಲಸ ಮುಂದುವರಿಯಬಾರದು. ಕಾರ್ಯಾದೇಶದ ಪಡೆದ ಅಂದರೆ ಆರು ತಿಂಗಳ ಗಡುವಿನೊಳಗೆ 2006-07ನೇ ಸಾಲಿನ ದರದಂತೆ ಮಂಜೂರಾದ ಅಂದಾಜು ಪಟ್ಟಿಯ ದರಗಳ ಪ್ರಕಾರವೇ ಕಾರ್ಯನಿರ್ವಹಿಸಬೇಕಾಗಿರುತ್ತದೆ.
53. ಟೆಂಡರ್ ಕುರಿತಾದ ನ್ಯಾಯಿಕ ವ್ಯಾಜ್ಯದ ಸಂದರ್ಭ ಉದ್ಭವಿಸಿದ್ದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಿವಿಲ್ ನ್ಯಾಯಾಲಯವು ವ್ಯಾಜ್ಯ ವ್ಯಾಪ್ತಿಯ ನ್ಯಾಯಾಲಯವಾಗಿರುತ್ತದೆ.
54. ಕರ್ನಾಟಕ ಮಾರಾಟ ತೆರಿಗೆಯ ಅಡಿಯಲ್ಲಿ ನೋಂದಣಿದಾರರಲ್ಲದವರು ಟೆಂಡರ್‌ನಲ್ಲಿ ಭಾಗವಹಿಸುವಂತಿಲ್ಲ. ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (Sales Tax Clearenace Certificate) ಲಗತ್ತಿಸಬೇಕು.
55. ಇಲಾಖೆಯ ಉಸ್ತುವಾರಿಯಲ್ಲಿ ಮಂಜೂರಾದ ಅಂದಾಜುಪಟ್ಟಿ ಮತ್ತು ನಕಾಶೆಯಂತೆ ಕಾಮಗಾರಿಯನ್ನು ಉತ್ತಮ ರೀತಿಯಲ್ಲಿ ನಿರ್ವಹಿಸುವುದು ಕಳಪೆ ಸಾಮಗ್ರಿಗಳನ್ನು ಉಪಯೋಗಿಸಬಾರದು. ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ತೆಗೆದುಕೊಳ್ಳುವ ಕಾಮಗಾರಿಯ ಅಳತೆಯೇ ಅಂತಿಮವಾಗಿದ್ದು ನ್ಯೂನತೆ ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರುರವರ ನಿರ್ಣಯವೇ ಅಂತಿಮವಾಗುವುದೆಂದು ಭಾವಿಸತಕ್ಕದ್ದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

ಪಿ.ಆರ್.50

## ಭದ್ರಾವತಿ ಅರಣ್ಯ ವಿಭಾಗ

## ಸಂಕ್ಷಿಪ್ತ ಮರು ಟೆಂಡರ್ ಪ್ರಕಟಣೆ

### ಸಂಖ್ಯೆ: ಎ2:ಬಿಯುಡಿ: ಕಟ್ಟಡ:ಸಿಆರ್-16: 06-07, ದಿನಾಂಕ:20ನೇ ಜನವರಿ, 2007

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2006-07ನೇ ಸಾಲಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗಕ್ಕೆ ಬರುವ ಭದ್ರಾವತಿ ಮತ್ತು ತರೀಕೆರೆ ವಲಯಗಳಲ್ಲಿ ಸಿವಿಲ್ ಕಾಮಗಾರಿ ನಿರ್ವಹಿಸುವ ಸಲುವಾಗಿ ಆಸಕ್ತ ನೊಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಆಸಕ್ತ ಗುತ್ತಿಗೆದಾರರು ದಿನಾಂಕ:24.02.2007ರ ಅಪರಾಹ್ನ 4.00 ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ರವರ ಕಛೇರಿಯಲ್ಲಿರಿಸಿದ ಟೆಂಡರ್ ಪೆಟ್ಟಿಗೆಗೆ ಹಾಕಲು ಕೋರಿದೆ. ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅದೇ ದಿನ ಅಪರಾಹ್ನ 4.30 ಗಂಟೆಗೆ ತೆರೆಯಲಾಗಿದೆ.

ಒಂದು ವೇಳೆ ಮೇಲೆ ಹೇಳಿದ ದಿನಾಂಕದಂದು ಯಾವ ಗುತ್ತಿಗೆದಾರರು ಟೆಂಡರ್ ಹಾಕದಿದ್ದಲ್ಲಿ ಇದೇ ಟೆಂಡರ್ ಪ್ರಕ್ರಿಯೆಯನ್ನು ಮುಂದುವರೆಸಿ ಮರು ಟೆಂಡರ್‌ನ್ನು ದಿನಾಂಕ:03.01.2007ರಂದು ಅಪರಾಹ್ನ 4.00 ಗಂಟೆಯೊಳಗೆ ಕರೆಯಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅದೇ ದಿನ ಅಪರಾಹ್ನ 4.30 ಗಂಟೆಗೆ ತೆರೆಯಲಾಗುವುದು.

| ಕ್ರ. ಸಂ. | ವಲಯ | ಘಟಕ ಸಂಖ್ಯೆ | ಕಾಮಗಾರಿಯ ವಿವರ | ಅಂದಾಜು ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. |
|---|---|---|---|---|---|
| 1 | 2 | 3 | 4 | 5 | 6 |
| 1. | ಭದ್ರಾವತಿ | 1 | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಕಟ್ಟಡ ಮತ್ತು ಸಿಬ್ಬಂದಿ ಶೌಚಾಲಯ ದುರಸ್ತಿ. | 2.00 | 5000 |
| 2. | ಭದ್ರಾವತಿ | 2 | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನಿವಾಸದ ಕಟ್ಟಡದ ದುರಸ್ತಿ. | 1.00 | 2500 |
| 3. | ಭದ್ರಾವತಿ | 3 | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಆವರಣದ ಸಿಬ್ಬಂದಿ ನಿವಾಸದ ಚಿಕ್ಕಪುಟ್ಟ ದುರಸ್ತಿ 2 ಕಟ್ಟಡಗಳು. | 0.50 | 1250 |
| 4. | ಭದ್ರಾವತಿ | 4 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿಯವರ ಕಛೇರಿ ಆವರಣದ ಸಿಬ್ಬಂದಿ ವಸತಿ ಗೃಹದ ಚಿಕ್ಕಪುಟ್ಟ ದುರಸ್ತಿ 2 ಕಟ್ಟಡಗಳು | 0.50 | 1250 |
| 5. | ಭದ್ರಾವತಿ | 5 | ಭದ್ರಾವತಿ ಜನ್ನಾಪುರ ಪ್ರದೇಶದಲ್ಲಿದ್ದ ಇಲಾಖಾ ವಸತಿ ಗೃಹಗಳ ಚಿಕ್ಕಪುಟ್ಟ ದುರಸ್ತಿ 4 ಕಟ್ಟಡಗಳು | 1.00 | 2500 |
| 6. | ತರೀಕೆರೆ | 6 | ತರೀಕೆರೆ ತಾಲ್ಲೂಕು ಕೆಮ್ಮಣ್ಣುಗುಂಡಿ ವಿಶ್ರಾಂತಿ ಗೃಹದ ನೀರಿನ ವ್ಯವಸ್ಥೆ ಮತ್ತು ಕಟ್ಟಡ ಅಭಿವೃದ್ಧಿ ಕೆಲಸ. | 2.00 | 5000 |

**ನಿಬಂಧನೆಗಳು:**

1. ಟೆಂಡರ್ ಪ್ರಕಟಣೆಯಲ್ಲಿ ತೋರಿಸಿರುವ ಕಾಮಗಾರಿಗಳ ಗುರಿ ಮತ್ತು ಪ್ರದೇಶಗಳ ವ್ಯತ್ಯಾಸವಾದಲ್ಲಿ ಪರಿಷ್ಕೃತ ಗುರಿ ಮತ್ತು ಪ್ರದೇಶಗಳನ್ನು ಕೆಲಸದ ಆದೇಶದ ಮೊದಲು ನೀಡಲಾಗುವುದು.
2. ಟೆಂಡರ್ ಫಾರಂಗಳನ್ನು ರೂ.200/- ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ:24.02.2007ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯೊಳಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿವುಳ್ಳವರು ಈ ವಿಭಾಗದಲ್ಲಿ 2006-07ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೊಂದಾಯಿಸಿಕೊಂಡಿರತಕ್ಕದ್ದು. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
3. ಪ್ರತಿ ಕಾಮಗಾರಿಗೂ ಪ್ರತ್ಯೇಕ ಟೆಂಡರ್ ಫಾರಂಗಳನ್ನು ತುಂಬಿ ಅಗತ್ಯ ಇ.ಎಂ.ಡಿ. ಹಣ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ರವರ ಹೆಸರಿಗೆ ಪಡೆದ ರಾಷ್ಟ್ರೀಕೃತ ಬ್ಯಾಂಕ್ ಡಿ.ಡಿ. ಜೊತೆಗೆ ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಕಛೇರಿಯಲ್ಲಿಟ್ಟ ಟೆಂಡರ್ ಪೆಟ್ಟಿಗೆಯೊಳಗೆ ಅಪರಾಹ್ನ 4.00 ಗಂಟೆಯೊಳಗೆ ಹಾಕುವುದು. ಟೆಂಡರ್ ಫಾರಂನಲ್ಲಿ ನಮೂದಿಸಿದ ಶೇಕಡಾವಾರು ಹೆಚ್ಚು ಅಥವಾ ಕಡಿಮೆ ದರವನ್ನು ಅಂಕ ಮತ್ತು ಅಕ್ಷರಗಳೆರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಬೇಕು. ತಿದ್ದುಪಡಿ ಇದ್ದಲ್ಲಿ ಟೆಂಡರ್‌ದಾರರು ಸಹಿಯೊಡನೆ ದೃಢೀಕರಿಸತಕ್ಕದ್ದು.
4. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ:24.02.2007ರಂದು ಅಪರಾಹ್ನ 4.00 ಗಂಟೆಯೊಳಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ರವರ ಕಛೇರಿಯಲ್ಲಿ ಸದರಿ ಉದ್ದೇಶಕ್ಕಾಗಿ ಇಡಲ್ಪಟ್ಟ ಟೆಂಡರ್ ಪೆಟ್ಟಿಗೆಯೊಳಗೆ ಹಾಕುವುದು ಹಾಗೂ ಅದೇ ದಿನ 4.30 ಗಂಟೆಗೆ ಟೆಂಡರ್ ಪೆಟ್ಟಿಗೆಯನ್ನು ತೆರೆದು ಎಲ್ಲಿ ಟೆಂಡರ್ ತೆರೆದು ಫಲಿತಾಂಶವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಅಥವಾ ಅವರಿಂದ ಅಧಿಕೃತವಾಗಿ ನಿಯೋಜಿಸಿದ ಅಧಿಕಾರಿಯಿಂದ ಘೋಷಣೆ ಮಾಡಲಾಗುವುದು.
5. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್ ಸ್ವೀಕರಿಸಲಾಗುವುದಿಲ್ಲ.
6. ಯಾವುದೇ ಕಾರಣ ನೀಡದೆ ಟೆಂಡರನ್ನು ಒಪ್ಪುವ ಅಥವಾ ತಿರಸ್ಕರಿಸುವ ಅಥವಾ ಟೆಂಡರ್ ರದ್ದುಪಡಿಸುವ ಅಥವಾ ಮುಂದೂಡುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಇವರು ಕಾಯ್ದಿರಿಸಿಕೊಂಡಿರುತ್ತಾರೆ. ಟೆಂಡರ್‌ದಾರರಿಂದ ಗುಣಮಟ್ಟದ ಕಾಮಗಾರಿ ಇಲ್ಲದೇ ಕಳಪೆ ಕಾಮಗಾರಿ ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ರವರು ಸದರಿ ಟೆಂಡರ್ ಗುತ್ತಿಗೆ ರದ್ದುಪಡಿಸುವ ಪೂರ್ಣ ಅಧಿಕಾರ ಹೊಂದಿರುತ್ತಾರೆ.
7. ಕೆಲಸಗಳ ವಿವರಗಳನ್ನು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
8. ದಿನಾಂಕ:24.02.2007ರಂದು ಟೆಂಡರ್ ಬಾರದಿದ್ದಲ್ಲಿ ಮರು ಟೆಂಡರ್‌ನ್ನು 03.01.2007ರಂದು ನಿಗದಿಪಡಿಸಿದ್ದು ಮರು ಟೆಂಡರಿಗೆ ಟೆಂಡರ್ ಫಾರಂಗಳು 03.01.2007ರಂದು ಮಧ್ಯಾಹ್ನ 1.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯುವುದು ಹಾಗೂ ಭರ್ತಿ ಮಾಡಿದ ಟೆಂಡರ್ ಫಾರಂಗಳು ಅಗತ್ಯ ಇ.ಎಂ.ಡಿ. ಮೊತ್ತದ ರಾಷ್ಟ್ರೀಕೃತ ಬ್ಯಾಂಕ್ ಹುಂಡಿಯೊಡನೆ 4.00 ಗಂಟೆಯೊಳಗೆ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು. ಉಳಿದಂತೆ 1 ರಿಂದ 7 ರ ವರೆಗೆ ನಿಬಂಧನೆಗಳು ಮರು ಟೆಂಡರ್‌ಗೂ ಸಹ ಅನ್ವಯಿಸುತ್ತದೆ.

**ಎಸ್. ವೆಂಕಟೇಸನ್**

ಪಿ.ಆರ್.51

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

**FORM- IV (See Rule-12)**

**NOTICE Dated:29th January, 2007**

It is hereby notified that the undersigned has changed his name from **M. GOPALA REDDY S/o MUNINAGAPPA** to **M. GOPALA GOWDA S/o MUNINAGAPPA.**

PD-21

**M. GOPALA REDDY S/o MUNINAGAPPA**

**FORM- IV (See Rule-12)**

**NOTICE Dated:12th January, 2006**

It is hereby notified that the undersigned has changed his name from **HARISH KUMAR K.** to **Dr. HARISH KUMAR K.**

PD-22 **HARISH KUMAR K.**

**ಪೊಲೀಸ್ ಇಲಾಖೆ**

**ಪೊಲೀಸ್ ಸೂಪರಿಂಟೆಂಡೆಂಟ್‌ರವರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕಟಣೆ**

**ಟೆಂಡರ್ ಕಂ ಹರಾಜು ತಿಳುವಳಿಕೆ**

**ಸಂಖ್ಯೆ: ಲೆಕ್ಕ (6)/ ವಾವಿ/ 03/ 05-06, ದಿನಾಂಕ:31ನೇ ಜನವರಿ 2007**

**ವಿಷಯ:** ಶಿವಮೊಗ್ಗ ಜಿಲ್ಲಾ ಪೊಲೀಸ್ ಘಟಕಕ್ಕೆ ಸೇರಿದ ಅನುಪಯುಕ್ತ ಟೈರ್, ಟ್ಯೂಬ್ ಮತ್ತು ವಾಹನ ಬಿಡಿಭಾಗಗಳನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇವಾರಿಗೊಳಿಸುವ ಬಗ್ಗೆ.

**ಉಲ್ಲೇಖ:** ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ರವರ ಪತ್ರ ಸಂಖ್ಯೆ: ಲೆಕ್ಕ (2)/ ಪಿಎಂಟಿ/ ಪೂವ/5/ 2004-05 ಮತ್ತು 142/ 2006-07/ 23.08.2004 ಹಾಗೂ 04.12.2006.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತಿಳಿಯಬಯಸುವುದೇನೆಂದರೆ, ದಿನಾಂಕ:07.03.2007ರಂದು ಬೆಳಿಗ್ಗೆ 11.00 ಗಂಟೆಗೆ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಆವರಣ, ಶಿವಮೊಗ್ಗ ಇಲ್ಲಿ ಶಿವಮೊಗ್ಗ ಜಿಲ್ಲಾ ಪೊಲೀಸ್ ಘಟಕದಲ್ಲಿ 2004-05 ಮತ್ತು 2005-06ನೇ ಸಾಲಿನಲ್ಲಿ ಶೇಖರವಾಗಿರುವ ಅನುಪಯುಕ್ತ ಟೈರ್, ಟ್ಯೂಬ್ ಮತ್ತು ವಾಹನ ಬಿಡಿಭಾಗಗಳನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇವಾರಿಗೊಳಿಸಲಾಗುವುದು. ಸದರಿ ಅನುಪಯುಕ್ತ ಟೈರ್, ಟ್ಯೂಬ್ ಮತ್ತು ವಾಹನ ಬಿಡಿಭಾಗಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ, ಶಿವಮೊಗ್ಗ ಇಲ್ಲಿ ಕಛೇರಿಯ ವೇಳೆಯಲ್ಲಿ ನೋಡಲು ಅವಕಾಶವಿರುತ್ತದೆ.

ಅನುಪಯುಕ್ತ ಟೈರ್, ಟ್ಯೂಬ್ ಮತ್ತು ವಾಹನ ಬಿಡಿಭಾಗಗಳ ವಿವರ ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ನಿರುಪಯುಕ್ತ ಟೈರು, ಟ್ಯೂಬು ಮತ್ತು ಬಿಡಿಭಾಗಗಳನ್ನು ವಾಹನಗಳಿಂದ ತೆಗೆದ ವರ್ಷ | ವಿವರ |
|---|---|---|
| 1. | 2004-05 | 80 ವಿವಿಧ ಸೈಜಿನ ಟೈರು ಮತ್ತು ಟ್ಯೂಬುಗಳು |
| 2. | 2005-06 | 36 ವಿವಿಧ ಸೈಜಿನ ಟೈರು ಮತ್ತು ಟ್ಯೂಬುಗಳು |
| 3. | 2004-05 | 31 ವಿವಿಧ ಮಾದರಿಯ ವಾಹನಗಳ 621 ವಿವಿಧ ಮಾದರಿಯ ಬಿಡಿಭಾಗಗಳು |
| 4. | 2005-06 | 32 ವಿವಿಧ ಮಾದರಿಯ ವಾಹನಗಳ 525 ವಿವಿಧ ಮಾದರಿಯ ಬಿಡಿಭಾಗಗಳು |

**ಹಳೆಯ ನಿರುಪಯುಕ್ತ ಪೊಲೀಸ್ ವಾಹನಗಳು**

| ಕ್ರ.ಸಂ. | ವಾಹನ ಸಂಖ್ಯೆ | ಮಾಡೆಲ್ | ಖರೀದಿಸಿದ ವರ್ಷ |
|---|---|---|---|
| 1. | ಕೆಎ 14 ಜಿ-78 | ಅಂಬಾಸಿಡರ್ ಕಾರು | 1991 |
| 2. | ಎಂಎಎಸ್-1701 | ಬುಲೆಟ್ ಮೋಟಾರ್ ಸೈಕಲ್ | 1975 |
| 3. | ಎಂಎಎಸ್-1702 | ಬುಲೆಟ್ ಮೋಟಾರ್ ಸೈಕಲ್ | 1975 |
| 4. | ಎಂಎಎಸ್-2000 | ಬುಲೆಟ್ ಮೋಟಾರ್ ಸೈಕಲ್ | 1976 |
| 5. | ಎಂಎಎಸ್-2002 | ಬುಲೆಟ್ ಮೋಟಾರ್ ಸೈಕಲ್ | 1976 |
| 6. | ಎಂಎಎಸ್-8508 | ಬುಲೆಟ್ ಮೋಟಾರ್ ಸೈಕಲ್ | 1980 |
| 7. | ಸಿಎಜಿ-7508 | ಬುಲೆಟ್ ಮೋಟಾರ್ ಸೈಕಲ್ | 1981 |
| 8. | ಸಿಎಜಿ-7513 | ಬುಲೆಟ್ ಮೋಟಾರ್ ಸೈಕಲ್ | 1981 |

**ಹರಾಜಿನ ಷರತ್ತುಗಳು:**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ಹರಾಜು ನಡೆಯುವ ವೇಳೆಗಿಂತ 1 ಗಂಟೆ ಮುಂಚಿತವಾಗಿ ತಮ್ಮ ಹೆಸರನ್ನು ನೊಂದಾಯಿಸಿಕೊಂಡು ರೂ.2.000-00 (ಎರಡು ಸಾವಿರ) ಗಳನ್ನು ಠೇವಣಿಯನ್ನಾಗಿ ಪಾವತಿ ಮಾಡಿ ಸ್ವೀಕೃತಿಯನ್ನು ಪಡೆಯತಕ್ಕದ್ದು, ಠೇವಣಿಯನ್ನು ಹಣವಿಲ್ಲದೆ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
2. ಮಾಲುಗಳಿಗೆ ಟೆಂಡರ್ ಕಳುಹಿಸುವಾಗ ಕೊಳ್ಳುವ ಬೆಲೆಯನ್ನು ಟೆಂಡರ್ ಫಾರಂನಲ್ಲಿ ಬಿಡ್ ಮೊತ್ತವನ್ನು ಅಂಕಿ ಮತ್ತು ಅಕ್ಷರ ಎರಡರಲ್ಲಿಯೂ ಬರೆಯಬೇಕು. ಸೀಲು ಮಾಡಿದ ಲಕೋಟೆಯನ್ನು ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ಅನುಪಯುಕ್ತ ಟೈರ್, ಟ್ಯೂಬ್ ಮತ್ತು ವಾಹನ ಬಿಡಿ ಭಾಗಗಳನ್ನು ಖರೀದಿಸುವ ಬಗ್ಗೆ ಎಂಬುದನ್ನು ಸ್ಪಷ್ಟವಾಗಿ ಬಿಡಿ ಅಕ್ಷರಗಳಲ್ಲಿ ಬರೆಯಬೇಕು.
3. ಪೂರ್ಣಗೊಳಿಸಿದ ಟೆಂಡರ್‌ಗಳನ್ನು ದಿನಾ:06.03.2007ರ ಸಂಜೆ 4.00 ಗಂಟೆಯೊಳಗಾಗಿ ಈ ಕಾರ್ಯಾಲಯಕ್ಕೆ ಕಳುಹಿಸಬೇಕು. ನಂತರ ಬಂದಂತಹ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ. ಟೆಂಡರ್ ಫಾರಂನ ಜೊತೆಯಲ್ಲಿ ರೂ.2.000-00 (ಎರಡು ಸಾವಿರ) ಗಳ ಡಿ.ಡಿ.ಯನ್ನು ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಹೆಸರಿನಲ್ಲಿ ಪಡೆದು ಕಳುಹಿಸಬೇಕು. ಮತ್ತು ಟೆಂಡರ್ ಕಂ ಬಹಿರಂಗ ಹರಾಜಿನ ದಿನ ಲಕೋಟೆಯಿಂದ ಟೆಂಡರನ್ನು ತೆರೆಯುವಾಗ ಟೆಂಡರ್‌ದಾರರು ಸ್ಥಳದಲ್ಲಿ ಹಾಜರಿರಬೇಕು.

4. ಟೆಂಡರ್‌ದಾರರು ಸಹ ಹೆಚ್ಚಿನ ಭದ್ರತಾ ಠೇವಣಿಯಿಲ್ಲದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಯಾವುದೇ ಅಭ್ಯಂತರವಿರುವುದಿಲ್ಲ.
5. ಅಸ್ಪಷ್ಟವಾಗಿ ನಮೂದಿಸಿದ ಟೆಂಡರ್ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಬೆಲೆಯನ್ನು ತಿದ್ದುಪಡಿ ಮಾಡಿದ್ದಲ್ಲಿ ಪೂರ್ಣ ಸಹಿ ಮಾಡಬೇಕು. ಮತ್ತು ಟೆಂಡರ್ ನಮೂನೆಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
6. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ದರವನ್ನು ಪರಿಶೀಲಿಸಿದ ನಂತರ ಟೆಂಡರ್ ಅರ್ಜಿಗಳನ್ನು ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಎಲ್ಲರ ಸಮ್ಮುಖದಲ್ಲಿ ತೆಗೆಯುವರು. ಈ ಎರಡರಲ್ಲಿ ಯಾರು ಹೆಚ್ಚಿನ ದರವನ್ನು ನೀಡಿರುತ್ತಾರೋ ಅವರನ್ನು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
7. ಬಿಡ್ಡುದಾರರು ಈ ಸಂಬಂಧವಾಗಿ ಇರುವ ಸರ್ಕಾರದ ಎಲ್ಲಾ ಆದೇಶಗಳಿಗೆ ಮತ್ತು ನಿಯಮಗಳಿಗೆ ಬದ್ಧರಾಗಿರಬೇಕು.
8. ಹರಾಜಿನಲ್ಲಿ ಏನಾದರೂ ತಕರಾರು ಬಂದಲ್ಲಿ ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ. ಇದನ್ನು ನ್ಯಾಯವಾಗಿ ಪಾಲಿಸತಕ್ಕದ್ದು.
9. ಪೊಲೀಸ್ ಅಧೀಕ್ಷಕರು ಹರಾಜಿನ ಸವಾಲನ್ನು ಯಾವುದೇ ಕಾರಣಗಳಿಲ್ಲದೇ ಸ್ವೀಕರಿಸಬಹುದು ಅಥವಾ ನಿರಾಕರಿಸಬಹುದು. ಇದರ ಮೇಲೆ ಯಾವುದೇ ಅಧಿಕಾರವಿರುವುದಿಲ್ಲ. ಪೊಲೀಸ್ ಅಧೀಕ್ಷಕರವರ ನಿರ್ಣಯವೇ ಅಂತಿಮವಾಗಿರುತ್ತದೆ.
10. ಮೌಲ್ಯವರ್ಧಿತ ತೆರಿಗೆ (VAT) ಯನ್ನು ಬಿಡ್ಡಿನ ಹಣದ ಮೇಲೆ ಕಾಯಿದೆಯ ಪ್ರಕಾರ ಬಿಡ್ಡಿನ ಹಣದ ಜೊತೆಗೆ ವಸೂಲಿ ಮಾಡಲಾಗುವುದು.
11. ಹರಾಜಿನಲ್ಲಿ ಬಿಡ್ಡುದಾರರು ಇಟ್ಟ ಠೇವಣಿ ಹಣವನ್ನು ಹರಾಜು ಮುಗಿದ ತಕ್ಷಣ ಹಿಂದಿರುಗಿಸಲಾಗುವುದು.
12. ಯಶಸ್ವಿ ಟೆಂಡರ್‌ದಾರರು/ ಬಿಡ್ಡುದಾರರು ಬಿಡ್ಡಿನ ಹಣದ ಶೇಕಡಾ 25% ಹಣವನ್ನು (ಠೇವಣಿಯನ್ನು ಬಿಟ್ಟು) ಸ್ಥಳದಲ್ಲೇ ತುಂಬಬೇಕು. ಉಳಿಕೆ ಹಣವನ್ನು ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ರವರು ಸದರಿ ಹರಾಜನ್ನು ಅಂಗೀಕರಿಸಿದ ನಂತರ ಉಳಿದ ಹಣವನ್ನು ಸಂಪೂರ್ಣವಾಗಿ ಪಾವತಿ ಮಾಡಿ ಹರಾಜು ಮಾಡಲಾದ ಸಾಮಗ್ರಿಗಳನ್ನು 8 ದಿನಗಳೊಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ತೆಗೆದುಕೊಂಡು ಹೋಗುವುದು. ತಪ್ಪಿದಲ್ಲಿ ತುಂಬಿರುವ ಶೇಕಡಾ 25% ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮತ್ತೊಮ್ಮೆ ಹೊಸದಾಗಿ ಜಾಹೀರಾತು ಮಾಡಿ ಮರು ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು.
13. ಹರಾಜಿನ ಸಂಬಂಧದಲ್ಲಿ ಯಾವುದೇ ವಿಧವಾದ ವಿವಾದ ಉದ್ಭವಿಸಿದ್ದಲ್ಲಿ ಪೊಲೀಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
14. ಹೆಚ್ಚಿನ ವಿವರ ಹಾಗೂ ಮಾಹಿತಿಗಳನ್ನು ಕಛೇರಿಯ ವೇಳೆಯಲ್ಲಿ ಬಂದು ತಿಳಿದುಕೊಳ್ಳಲು ಕೋರಲಾಗಿದೆ.

**ಟೆಂಡರ್ ಫಾರಂ ನಮೂನೆ**

ರವರಿಗೆ,
ಪೊಲೀಸ್ ಅಧೀಕ್ಷಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಮಾನ್ಯರೆ,

ತಮ್ಮ ಕಛೇರಿಯ ಟೆಂಡರ್ ಕಂ ಹರಾಜು ತಿಳುವಳಿಕೆ ಪ್ರಕಟಣೆ ಸಂ.ಲೆಕ್ಕ (6) ವಾವಿ/ 03/ 2005-06. ದಿನಾಂಕ: ...01.2007ರಲ್ಲಿ ತಿಳಿಸಿದ ಅನುಪಯುಕ್ತ ಟೈರ್, ಟ್ಯೂಬ್‌ಗಳನ್ನು ರೂ....................(ರೂಪಾಯಿ............................)ಗಳಿಗೆ ವಾಹನ ಬಿಡಿಭಾಗಗಳನ್ನು ರೂ........ (ರೂಪಾಯಿ..........................)ಗಳಿಗೆ ಮತ್ತು ಹಳೆಯ ಅನುಪಯುಕ್ತ ವಾಹನಗಳನ್ನು ರೂ............(ರೂಪಾಯಿ..........................)ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,

ದಿನಾಂಕ:
ಸ್ಥಳ:

(ಟೆಂಡರ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

ಪೊಲೀಸ್ ಸೂಪರಿಂಟೆಂಡೆಂಟ್,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 56

## ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ-576101

## ಸಂಕ್ಷಿಪ್ತ ಟೆಂಡರು ಪ್ರಕಟಣೆ

**ನಂ. ಕಾನಿಇಂ:ಬಂಮೀವಿ: ಉಡುಪಿ: ಎಇ: ಟೆಂಡರು ಸೂಚನೆ: 1448: 2006-2007, ದಿನಾಂಕ:31ನೇ ಜನವರಿ, 2007**

ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು "ಪ್ರಾಕೃತಿಕ ವಿಕೋಪ ನಿಧಿಯಡಿ" ಈ ಕೆಳಕಂಡ ಕಾಮಗಾರಿಗಾಗಿ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ಕರ್ನಾಟಕ ರಾಜ್ಯ ಲೋಕೋಪಯೋಗಿ ಇಲಾಖೆಯಲ್ಲಿ ಮತ್ತು C.P.W.D. ಯಲ್ಲಿ ಹೆಸರನ್ನು ನೊಂದಾಯಿಸಲಾದ ಅರ್ಹ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಗದಿತ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ದಿನಾಂಕ:**26.02.2007** ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸುವರು. ಟೆಂಡರನ್ನು ಸಾಧ್ಯವಾದಲ್ಲಿ ಅದೇ ದಿನ 4.30 ಗಂಟೆಗೆ ತೆರೆಯಲಾಗುವುದು.

ನಿಬಂಧನೆಗಳೊಂದಿಗೆ ಟೆಂಡರನ್ನು ಒದಗಿಸಿದಲ್ಲಿ ತಿರಸ್ಕರಿಸಲಾಗುವುದು.

ಖಾಲಿ ಟೆಂಡರು ಫಾರಂಗಳಿಗಾಗಿ ಅರ್ಜಿಯನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಅದನ್ನು ಹಿಂತಿರುಗಿಸುವುದಿಲ್ಲ) ದಿನಾಂಕ:**24.02.2007** ರವರೆಗೆ ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಗುತ್ತಿಗೆದಾರರು ಅರ್ಜಿ ಫಾರಂನೊಂದಿಗೆ ರಿಜಿಸ್ಟ್ರೇಷನ್ ನವೀಕರಣ ಸರ್ಟಿಫೈಡ್ ಪ್ರತಿಯನ್ನು ಲಗತ್ತಿಸಿರಬೇಕು.

ಖಾಲಿ ಟೆಂಡರ್ ಫಾರಂಗಳನ್ನು ದಿನಾಂಕ:**24.02.2007** ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ವಿತರಿಸಲಾಗುವುದು. ಹೆಚ್ಚಿನ ವಿವರಗಳನ್ನು ವಿಭಾಗೀಯ ಕಛೇರಿಯಲ್ಲಿ ಎಲ್ಲಾ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರು ಅಂದಾಜು ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. | ಕಾಮಗಾರಿ ಮುಗಿಸಲು ನಿಗದಿಪಡಿಸಿದ ಅವಧಿ (ಮಳೆಗಾಲದ ಅವಧಿ ಹೊರತು ಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| **"ಪ್ರಾಕೃತಿಕ ವಿಕೋಪ ನಿಧಿ ಕಾಮಗಾರಿಗಳು:** | | | | | | | |
| 1. | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಕುಂದಾಪುರ ವಿಧಾನ ಸಭಾ ಕ್ಷೇತ್ರದ ತೆಕ್ಕಟ್ಟೆ ಕೋಮೆ ಮೀನುಗಾರಿಕಾ ರಸ್ತೆ ದುರಸ್ತಿ | 2.40 | 6,000.00 | 1 ತಿಂಗಳು | ಐಟಂವಾರು | ರೂ.500.00 + ತೆರಿಗೆ | Class III & above |
| 2. | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಕುಂದಾಪುರ ವಿಧಾನ ಸಭಾ ಕ್ಷೇತ್ರದ ಕೋಟೇಶ್ವರ ಕಿನಾರೆ, ಮೀನುಗಾರಿಕಾ ರಸ್ತೆ ದುರಸ್ತಿ | 3.50 | 8,750.00 | 1 ತಿಂಗಳು | ಐಟಂವಾರು | ರೂ.1,000.00 + ತೆರಿಗೆ | Class III & above |
| 3. | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಕುಂದಾಪುರ ವಿಧಾನ ಸಭಾ ಕ್ಷೇತ್ರದ ಹೊದ್ರೊಳಿ ಅಮಾಸೆಕಡು ಮೀನುಗಾರಿಕಾ ರಸ್ತೆ ದುರಸ್ತಿ | 7.00 | 14,000.00 | 1 ತಿಂಗಳು | ಐಟಂವಾರು | ರೂ.1,500.00 + ತೆರಿಗೆ | Class III & above |
| 4. | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕು ಕುಂದಾಪುರ ವಿಧಾನ ಸಭಾ ಕ್ಷೇತ್ರದ ಬೀಜಾಡಿ ಮೀನುಗಾರಿಕಾ ರಸ್ತೆ ದುರಸ್ತಿ | 8.00 | 16,000.00 | 1 ತಿಂಗಳು | ಐಟಂವಾರು | ರೂ.1,500.00 + ತೆರಿಗೆ | Class III & above |

**ಸೂಚನೆಗಳು:**

1) ಕಾಮಗಾರಿಗೆ ಬೇಕಾದ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಸ್ವಂತ ಖರ್ಚಿನಿಂದ ಪೂರೈಸಿ ಕೊಳ್ಳತಕ್ಕದ್ದು ಹಾಗೂ ಈ ಬಗ್ಗೆ ಸಾಮಗ್ರಿಗಳ ಪ್ರಮಾಣ ಪತ್ರವನ್ನು ಒದಗಿಸುವುದು.

2) ಮೇಲೆ ತಿಳಿಸಿದ ದಿನಾಂಕಗಳಂದು ಸರ್ಕಾರಿ ರಜೆಗಳು ಬಂದರೆ ಅದರ ಮುಂದಿನ ದಿನಾಂಕವನ್ನು ಪರಿಗಣಿಸುವುದು.

3) ಇ.ಎಂ.ಡಿ. ಯನ್ನು ಡಿಮಾಂಡ್ ಡ್ರಾಫ್ಟ್ ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಪತ್ರಗಳು ಅಥವಾ ಶೆಡ್ಯೂಲ್ಡ್ ಬ್ಯಾಂಕಿನ ಇಲ್ಲವೆ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡಮಾಡಿದ ಬ್ಯಾಂಕರ್ಸ್ ಚೆಕ್ ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು. ಇ.ಎಂ.ಡಿ. ಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಸ್ವೀಕರಿಸಲಾಗುವುದಿಲ್ಲ.

4) ಗುತ್ತಿಗೆದಾರರು ಟೆಂಡರಿಗಿಟ್ಟ ಕಾಮಗಾರಿಯ ಮೊತ್ತದ ಶೇಕಡಾ 30 ಭಾಗದಷ್ಟು ಮೊತ್ತದ ಇದೆ ರೀತಿಯ ಒಂದು ಕಾಮಗಾರಿಯನ್ನು ಕಳೆದ ಐದು ವರ್ಷಗಳಲ್ಲಿ ಒಂದೇ ಹಣಕಾಸು ವರ್ಷದಲ್ಲಿ ಮಾಡಿದ ಬಗ್ಗೆ ಸಂಬಂಧಪಟ್ಟ ಕಾರ್ಯನಿರ್ವಾಹಕ ಇಂಜಿನಿಯರ್ ರವರಿಂದ ಪ್ರಮಾಣ ಪತ್ರವನ್ನು ಮತ್ತು ಗುತ್ತಿಗೆದಾರರ ನೊಂದಣಿ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ತಪ್ಪದೆ ಸಲ್ಲಿಸತಕ್ಕದ್ದು. ಇಲ್ಲವಾದಲ್ಲಿ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಯನಿರ್ವಾಹಕ ಇಂಜಿನಿಯರ್,
ಬಂದರು ಮತ್ತು ಮೀನುಗಾರಿಕಾ ವಿಭಾಗ,
ಉಡುಪಿ.

ಪಿ.ಆರ್. 57

## ಕಾರ್ಯನಿರ್ವಾಹಕ ನಿರ್ದೇಶಕರು, ಹುಲಿ-ಸಿಂಹಧಾಮ, ತ್ಯಾವರಕೊಪ್ಪ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ

### ಸಂಕ್ಷಿಪ್ತ ಟೆಂಡರು ಪ್ರಕಟಣೆ

### ನಂ.ಎ2: ಹುಸಿಧಾಅ: ಸಿಆರ್-14/ 2006-07, ದಿನಾಂಕ:1ನೇ ಫೆಬ್ರವರಿ, 2007

ಶಿವಮೊಗ್ಗ ವನ್ಯಜೀವಿ ವಿಭಾಗ ವ್ಯಾಪ್ತಿಯ ಆಡಳಿತಕ್ಕೆ ಒಳಪಡುವ ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದಲ್ಲಿ ಪೋಷಿಸಲ್ಪಡುತ್ತಿರುವ ಮಾಂಸಹಾರಿ ವನ್ಯಪ್ರಾಣಿ ಮತ್ತು ಸಸ್ಯಹಾರಿ ವನ್ಯಪ್ರಾಣಿ ಪಕ್ಷಿಗಳಿಗೆ 2007-2008ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಮಾಂಸಹಾರ ಮತ್ತು ಸಸ್ಯಹಾರ ಆಹಾರ ಪದಾರ್ಥಗಳನ್ನು, ಪ್ರತಿದಿನದ ಅಗತ್ಯಕ್ಕೆ ಅನುಗುಣವಾಗಿ ಒದಗಿಸುವ ಕೆಲಸಕ್ಕಾಗಿ ಈ ವಿಭಾಗದ ನೊಂದಾಯಿತ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ದಿನಾಂಕ:05.03.2007 ರಂದು 3.00 ಗಂಟೆಯವರೆಗೆ ಸ್ವೀಕರಿಸಿ, ಸಾಧ್ಯವಾದರೆ ಅದೇ ದಿನ 4.00 ಗಂಟೆಯ ನಂತರ ತೆರೆಯಲಾಗುವುದು.

**ಅನುಸೂಚಿ**

**ಘಟಕ-1 ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದ ಸಸ್ಯಹಾರಿ ಪ್ರಾಣಿ ಪಕ್ಷಿಗಳಿಗೆ ಆಹಾರ ಸರಬರಾಜು**

| ಕ್ರ. ಸಂ. | ಆಹಾರ ಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂ.ಗಳಲ್ಲಿ) | ಮುಂಗಡ ಠೇವಣಿ. ಇ.ಎಂ.ಡಿ. (ರೂ.ಗಳಲ್ಲಿ) |
|---|---|---|---|---|
| 1. | ಸೂರ್ಯಕಾಂತಿ ಹಿಂಡಿ | 15001.00 ಕೆ.ಜಿ. | 732100.00 | 36605.00 |
| 2. | ಗೋಧಿ ಬೂಸ | 15001.00 ಕೆ.ಜಿ. | | |
| 3. | ಹುರಳಿನುಚ್ಚು | 15001.00 ಕೆ.ಜಿ. | | |
| 4. | ರಾಗಿ | 162.50 ಕೆ.ಜಿ. | | |
| 5. | ಹೈಬ್ರಿಡ್ ಜೋಳ. | 162.50 ಕೆ.ಜಿ. | | |
| 6. | ದಪ್ಪ ಭತ್ತ (ಜಯ ಅಥವಾ 1001 ತಳಿ) | 162.50 ಕೆ.ಜಿ. | | |
| 7. | ದಪ್ಪ ಅಕ್ಕಿ (ಜಯ ಅಥವಾ 1001 ತಳಿ) | 1642.50 ಕೆ.ಜಿ. | | |
| 8. | ಕಡ್ಲೆಕಾಳು | 146.00 ಕೆ.ಜಿ. | | |
| 9. | ಹೆಸರು ಕಾಳು | 146.00 ಕೆ.ಜಿ. | | |
| 10. | ಹುರಿಗಡಲೆ | 146.00 ಕೆ.ಜಿ. | | |
| 11. | ತರಕಾರಿ (ಕ್ಯಾರೇಟ್, ಬೀಟ್ ರೋಟ್, ಕ್ಯಾಬೀಜ್, ನವಿಲು ಕೋಸು ಮಿಶ್ರ) | 3431.00 ಕೆ.ಜಿ. | | |
| 12. | ನಂದಿನಿ ಹಾಲು | 1460 ಲೀಟರ್ | | |
| 13. | ಉಪ್ಪು (ಹರಳು) | 346.75 ಕೆ.ಜಿ. | | |
| 14. | ಪಚ್ಚೆ ಬಾಳೆಹಣ್ಣು (ಕನಿಷ್ಟ 100 ಗ್ರಾಂ. ತೂಕಕ್ಕಿಂತ ಕಡಿಮೆ ಇಲ್ಲದ) | 2190 ಸಂಖ್ಯೆ | | |
| 15. | ಹಸಿರು ಮೇವು | 286525.00 ಕೆ.ಜಿ. | | |

**ಘಟಕ-2**

**ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದ ಮಾಂಸಹಾರಿ ಪ್ರಾಣಿಗಳಿಗೆ ಆಹಾರ ಸರಬರಾಜು**

| ಕ್ರ. ಸಂ. | ಆಹಾರ ಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂ.ಗಳಲ್ಲಿ) | ಮುಂಗಡ ಠೇವಣಿ. ಇ.ಎಂ.ಡಿ. (ರೂ.ಗಳಲ್ಲಿ) |
|---|---|---|---|---|
| 1. | ಮಾಂಸ (ಮೂಳೆ ಸಹಿತ) | 58344.00 ಕೆ.ಜಿ. | 1599300.00 | 79965.00 |
| 2. | ಮಾಂಸ (ಮೂಳೆ ರಹಿತ) | 312.00 ಕೆ.ಜಿ. | | |
| 3. | ಕೋಳಿ ಮಾಂಸ | 6708.00 ಕೆ.ಜಿ. | | |
| 4. | ಜೀವಂತ ಕೋಳಿ (ಪ್ರತಿ ಕೋಳಿ ಕನಿಷ್ಟ 1.50 ಕೆ.ಜಿ.) | 104 ಸಂಖ್ಯೆ | | |
| 5. | ಕೋಳಿಮೊಟ್ಟೆ | 2000 ಸಂಖ್ಯೆ | | |

**ಷರತ್ತುಗಳು**

1. ಟೆಂಡರ್ ಫಾರಂಗಳನ್ನು ದಿನಾಂಕ:05.03.2007ರ ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.30 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ ಅನುಸೂಚಿಯಲ್ಲಿ ತಿಳಿಸಿರುವ ವಿವಿಧ ಘಟಕಗಳ ಆಹಾರ ಸರಬರಾಜಿಗೆ ಟೆಂಡರ್ ಫಾರಂ ಶುಲ್ಕ 1000/- (ಒಂದು ಸಾವಿರ ರೂಪಾಯಿ ಮಾತ್ರ) (ಶಾಸನ ಬದ್ಧ ತೆರಿಗೆಗಳನ್ನು ಒಳಗೊಂಡ) ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಸದಸ್ಯ ಕಾರ್ಯದರ್ಶಿಗಳು, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ/ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ಕಛೇರಿ ವೇಳೆಯಲ್ಲಿ ಪಾವತಿಸಿ (ಹಿಂತಿರುಗಿಸಲಾಗುವುದಿಲ್ಲ) ಟೆಂಡರ್ ಫಾರಂಗಳನ್ನು ಪಡೆಯಬಹುದಾಗಿದೆ.
2. ಪ್ರತಿಯೊಂದು ಘಟಕದ ಆಹಾರ ಸರಬರಾಜಿಗೆ ಪ್ರತ್ಯೇಕ ಟೆಂಡರ್ ಫಾರಂಗಳನ್ನು ನಿಗದಿತ ಇ.ಎಂ.ಡಿ. ಮತ್ತಿತರೆ ದಾಖಲೆಗಳೊಂದಿಗೆ ಹಾಕತಕ್ಕದ್ದು.
3. ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ನಿರಾಕರಿಸಲಾಗುವುದು. ಯಾವುದೇ ಕಾರಣ ನೀಡದೇ ಟೆಂಡರ್‌ನ್ನು ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿದಾರರು ಕಾಯ್ದಿರಿಸಿಕೊಂಡಿರುತ್ತಾರೆ.
4. ಟೆಂಡರ್ ನಿಗದಿಪಡಿಸಿದ ದಿನಾಂಕದಂದು ಯಾವುದೇ ರಜಾದಿನವಾಗಿದ್ದಲ್ಲಿ ಆ ದಿನವನ್ನು ಮಾರನೆಯ ಕೆಲಸದ ದಿನ ಎಂದು ತಿಳಿಯತಕ್ಕದ್ದು.
5. ಇನ್ನೂ ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯ ಕಛೇರಿ ವೇಳೆಯಲ್ಲಿ ಪಡೆಯ ಬಹುದಾಗಿದೆ.

ಕಾರ್ಯನಿರ್ವಾಹಕ ನಿರ್ದೇಶಕರು,
ಹುಲಿ-ಸಿಂಹಧಾಮ, ತ್ಯಾವರೆಕೊಪ್ಪ ಹಾಗೂ
ಉಪಅರಣ್ಯ ಸಂರಕ್ಷಣಾಧಿಕಾರಿಗಳು,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 58

## ಕರ್ನಾಟಕ ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ

## ಸಂಕ್ಷಿಪ್ತ ಟೆಂಡರು ಪ್ರಕಟಣೆ

### ನಂ.ಎ2:ಆಆ:ಸಿಆರ್-16/ 2006-07, ದಿನಾಂಕ:1ನೇ ಫೆಬ್ರವರಿ, 2007

ಶಿವಮೊಗ್ಗ ವನ್ಯಜೀವಿ ವಿಭಾಗಕ್ಕೆ ಒಳಪಡುವ ಸಕ್ರೆಬೈಲು ಇಲಾಖೆ ಆನೆ ಬಿಡಾರದಲ್ಲಿ ಪೋಷಿಸಲ್ಪಡುತ್ತಿರುವ ಇಲಾಖಾ ಆನೆಗಳಿಗೆ 2007-2008ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು, ಪ್ರತಿದಿನದ ಅಗತ್ಯಕ್ಕೆ ಅನುಗುಣವಾಗಿ ಒದಗಿಸುವ ಕೆಲಸಕ್ಕಾಗಿ ಈ ವಿಭಾಗದ ನೊಂದಾಯಿತ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ದಿನಾಂಕ:05.03.2007ರಂದು 3.00 ಗಂಟೆಯವರೆಗೆ ಸ್ವೀಕರಿಸಿ, ಸಾಧ್ಯವಾದರೆ ಅದೇ ದಿನ 4.00 ಗಂಟೆಯ ನಂತರ ತೆರೆಯಲಾಗುವುದು.

**ಅನುಸೂಚಿ**

**ಸಕ್ರೆ ಬೈಲು ಆನೆಗಳ ಕ್ಯಾಂಪಿನ ಆನೆಗಳಿಗೆ ಮೇವು ಆಹಾರ ಸರಬರಾಜು**

| ಕ್ರ. ಸಂ. | ಆಹಾರ ಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂ.ಗಳಲ್ಲಿ) | ಮುಂಗಡ ಠೇವಣಿ. ಇ.ಎಂ.ಡಿ. (ರೂ.ಗಳಲ್ಲಿ) |
|---|---|---|---|---|
| 1. | ದಪ್ಪ ಭತ್ತ (ಜಯ ಅಥವಾ 1001 ತಳಿ) | 28650.00 ಕೆ.ಜಿ. | 829200.00 | 41460.00 |
| 2. | ಭತ್ತದ ಹುಲ್ಲು | 68365.00 ಕೆ.ಜಿ. | | |
| 3. | ಬಲಿತ ತೆಂಗಿನಕಾಯಿ (ಕನಿಷ್ಟ 500 ಗ್ರಾಂ ತೂಕ) | 10220 ಸಂಖ್ಯೆ | | |
| 4. | ದಪ್ಪ ಅಕ್ಕಿ (ಜಯ ಅಥವಾ 1001 ತಳಿ) | 29280.00 ಕೆ.ಜಿ. | | |
| 5. | ಬೆಲ್ಲ (ಉಂಡೆ) | 1734.00 ಕೆ.ಜಿ. | | |
| 6. | ಉಪ್ಪು (ಹರಳು) | 949.00 ಕೆ.ಜಿ. | | |
| 7. | ಕಬ್ಬು (ಬಲಿತದ್ದು) | 5000.00 ಕೆ.ಜಿ. | | |
| 8. | ಹರಳೆಣ್ಣೆ | 1277.50 ಲೀ. | | |

**ಷರತ್ತುಗಳು**

1. ಟೆಂಡರ್ ಫಾರಂಗಳನ್ನು ದಿನಾಂಕ:05.03.2007ರ ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.30 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ ಅನುಸೂಚಿಯಲ್ಲಿ ತಿಳಿಸಿರುವ ಆಹಾರ ಸರಬರಾಜಿಗೆ ಟೆಂಡರ್ ಫಾರಂ ಶುಲ್ಕ 1000/- (ಒಂದು ಸಾವಿರ ರೂಪಾಯಿ ಮಾತ್ರ) (ಶಾಸನ ಬದ್ಧ ತೆರಿಗೆಗಳನ್ನು ಒಳಗೊಂಡ) ಈ ಕೆಳಗೆ ಸಹಿಮಾಡಿದ ಅಧಿಕಾರಿಗಳ ಹೆಸರಿನಲ್ಲಿ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ/ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ಕಛೇರಿ ವೇಳೆಯಲ್ಲಿ ಪಾವತಿಸಿ (ಹಿಂತಿರುಗಿಸಲಾಗುವುದಿಲ್ಲ) ಟೆಂಡರ್ ಫಾರಂಗಳನ್ನು ಪಡೆಯಬಹುದಾಗಿದೆ.
2. ಆಹಾರ ಸರಬರಾಜಿಗೆ ಟೆಂಡರ್ ಫಾರಂಗಳನ್ನು ನಿಗದಿತ ಇ.ಎಂ.ಡಿ. ಮತ್ತಿತರೆ ದಾಖಲೆಗಳೊಂದಿಗೆ ಹಾಕತಕ್ಕದ್ದು.
3. ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ನಿರಾಕರಿಸಲಾಗುವುದು. ಯಾವುದೇ ಕಾರಣ ನೀಡದೇ ಟೆಂಡರ್‌ನ್ನು ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿದಾರರು ಕಾಯ್ದಿರಿಸಿಕೊಂಡಿರುತ್ತಾರೆ.
4. ಟೆಂಡರ್ ನಿಗದಿಪಡಿಸಿದ ದಿನಾಂಕದಂದು ಯಾವುದೇ ರಜಾದಿನವಾಗಿದ್ದಲ್ಲಿ ಆ ದಿನವನ್ನು ಮಾರನೆಯ ಕೆಲಸದ ದಿನ ಎಂದು ತಿಳಿಯತಕ್ಕದ್ದು.
5. ಇನ್ನೂ ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯ ಕಛೇರಿ ವೇಳೆಯಲ್ಲಿ ಪಡೆಯ ಬಹುದಾಗಿದೆ.

ಉಪಅರಣ್ಯ ಸಂರಕ್ಷಣಾಧಿಕಾರಿಗಳು,
ವನ್ಯಜೀವಿ ವಿಭಾಗ, ಶಿವಮೊಗ್ಗ.

ಪಿ.ಆರ್. 59

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಶಿವಮೊಗ್ಗ

## ಟೆಂಡರ್ ಹರಾಜು ಪ್ರಕಟಣೆ

### ಸಂಖ್ಯೆ: ತೋಉನಿ/ಶಿ/ ತಾಸ1/ 2006-07, ದಿನಾಂಕ:2ನೇ ಫೆಬ್ರವರಿ, 2007

ತೋಟಗಾರಿಕೆ ಉಪನಿರ್ದೇಶಕರು, ಗಾಂಧಿ ಪಾರ್ಕ್, ಶಿವಮೊಗ್ಗ ರವರ ಅಧೀನದಲ್ಲಿ ಬರುವ ಜಿಲ್ಲೆಯ ತೋಟಗಾರಿಕ ಕ್ಷೇತ್ರ/ ನರ್ಸರಿಯಲ್ಲಿನ ವಿವಿಧ ಫಸಲುಗಳನ್ನು ಟೆಂಡರ್/ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಈ ಕೆಳಕಂಡಂತೆ ದಿನಾಂಕಗಳನ್ನು ನಿಗದಿ ಪಡಿಸಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ/ ನರ್ಸರಿಯ ಹೆಸರು | ಫಸಲು | | ಟೆಂಡರ್ ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ದಿನಾಂಕ/ ವೇಳೆ | ಟೆಂಡರ್ ತೆರೆಯುವ ಸ್ಥಳ ಮತ್ತು ಬಹಿರಂಗ ಹರಾಜು ಸ್ಥಳ ದಿನಾಂಕ ಮತ್ತು ವೇಳೆ | ಇ.ಎಂ.ಡಿ. ಮೊತ್ತ | ಟೆಂಡರ್ ಶುಲ್ಕ |
|---|---|---|---|---|---|---|---|---|---|
| | | ಹೆಸರು | ಅವಧಿ | | | | | | |
| 1 | 2 | 3 | 4 | 5 | 6 | 7 | 8 | 9 | 10 |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 1. | ಕಛೇರಿ ಸಸ್ಯಾಗಾರ, ಭದ್ರಾವತಿ | ಸಪೋಟ | 01.01.07 ರಿಂದ 30.06.07 | 21.03.07 5.00 PM | 22.03.07 11.30 AM | 22.03.07 12.30 PM | ಸಹಾಯಕ ತೋಟಗಾರಿಕೆ ನಿರ್ದೇಶಕರು, ಕಛೇರಿ, ಭದ್ರಾವತಿ | 500/- | ಟೆಂಡರ್/ ಹರಾಜು |
| | | ತೆಂಗು | 01.01.07 ರಿಂದ 31.12.07 | 10.04.07 5.00 PM | 11.04.07 11.30 AM | 11.04.07 1.30 PM | | 1000/- | ಟೆಂಡರ್/ ಹರಾಜು |
| 2. | ಗಂಗನಕೊಪ್ಪ ತೋಟಗಾರಿಕೆ ಕ್ಷೇತ್ರ, ಹೊಸನಗರ | ಸಪೋಟ | 01.01.07 ರಿಂದ 30.06.07 | 20.03.07 5.00 PM | 21.03.07 11.30 AM | 21.03.07 12.30 PM | ಸಹಾಯಕ ತೋಟಗಾರಿಕೆ ನಿರ್ದೇಶಕರು, ಹೊಸನಗರ | 2000/- | ಟೆಂಡರ್/ ಮಾತ್ರ |
| | | ತೆಂಗು | 01.01.07 ರಿಂದ 31.12.07 | 20.03.07 5.00 PM | 21.03.07 11.30 AM | 21.03.07 1.30 PM | | 1000/- | ಟೆಂಡರ್/ ಮಾತ್ರ |
| 3. | ಕುಶಾವತಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | ಸಪೋಟ | 01.01.07 ರಿಂದ 30.06.07 | 07.03.07 5.00 PM | 08.03.07 11.30 AM | 08.03.07 12.30 PM | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ತೀರ್ಥಹಳ್ಳಿ | 1000/- | ಟೆಂಡರ್/ ಮಾತ್ರ |
| | | ತೆಂಗು | 01.01.07 ರಿಂದ 31.12.07 | 11.04.07 5.00 PM | 12.04.07 11.30 AM | 12.04.07 1.30 PM | | 5000/- | ಟೆಂಡರ್/ ಮಾತ್ರ |
| 4. | ಕಛೇರಿ ಸಸ್ಯಾಗಾರ ಶಿಕಾರಿಪುರ | ತೆಂಗು | 01.01.07 ರಿಂದ 31.12.07 | 03.04.07 5.00 PM | 04.04.07 11.30 AM | 04.04.07 1.30 PM | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಶಿಕಾರಿಪುರ | 1000/- | ಟೆಂಡರ್/ ಮಾತ್ರ |

**ಟೆಂಡರ್-ಯಾ- ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಪಾಲಿಸಬೇಕಾದ ನಿಯಮ (ಷರತ್ತು)ಗಳು:**

1. ಕಛೇರಿ ಸಸ್ಯಾಗಾರ ಭದ್ರಾವತಿ ಹೊರತುಪಡಿಸಿ ಎಲ್ಲಾ ಕ್ಷೇತ್ರಗಳ ಸಪೋಟ/ ತೆಂಗು ಫಸಲನ್ನು ಟೆಂಡರ್ ಮೂಲಕ ವಿಲೇವಾರಿ ಮಾಡಲಾಗುವುದು. ಭದ್ರಾವತಿ ಸಸ್ಯಾಗಾರದ ಫಸಲನ್ನು ಹರಾಜು ಟೆಂಡರ್ ಮೂಲಕ ವಿಲೇವಾರಿ ಮಾಡಲಾಗುವುದು.
2. ಫಸಲಿನ ಟೆಂಡರ್‌ನಲ್ಲಿ ಭಾಗವಹಿಸಲು ಇಷ್ಟವುಳ್ಳವರು ಕಛೇರಿ ವೇಳೆಯಲ್ಲಿ ನಿಗದಿತ ಟೆಂಡರ್ ಫಾರಂನ್ನು ರೂ.25/- (ರೂ ಇಪ್ಪತ್ತೈದು) ಗಳನ್ನು ಪಾವತಿ ಮಾಡಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂನಲ್ಲಿ ಮಾತ್ರ ಟೆಂಡರ್ ಸಲ್ಲಿಸಬೇಕು.
3. ಟೆಂಡರ್ ಫಾರಂನ್ನು ಭರ್ತಿ ಮಾಡಿ ಇ.ಎಂ.ಡಿ. ಮೊತ್ತ ಮತ್ತು ಟೆಂಡರ್ ಮೊತ್ತದ ಶೇ.50ರಷ್ಟು ಹಣವನ್ನು ಪ್ರತ್ಯೇಕ ಕ್ರಾಸ್ ಡಿ.ಡಿ.ಯೊಂದಿಗೆ ಲಗತ್ತಿಸಿ ಸೀಲು ಮಾಡಿದ ಲಕೋಟೆಯಲ್ಲಿ ಸಲ್ಲಿಸಬೇಕು.
4. ಇ.ಎಂ.ಡಿ. ಹಣ ಮತ್ತು ಶೇ.50ರ ಹಣದ ಕ್ರಾಸ್ ಡಿ.ಡಿ.ಯನ್ನು ಕ್ಷೇತ್ರದ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು/ ಸಹಾಯಕ ತೋಟಗಾರಿಕೆ ನಿರ್ದೇಶಕರು ಪದನಾಮದಲ್ಲಿ ತೆಗೆಯಬೇಕು.
5. ಟೆಂಡರ್ ಫಾರಂನಲ್ಲಿ ಪೂರ್ಣ ಹೆಸರು, ವಿಳಾಸ, ಟೆಂಡರ್ ಮೊತ್ತ (ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಪ್ರತ್ಯೇಕವಾಗಿ) ಇತ್ಯಾದಿಗಳನ್ನು ಸಂಪೂರ್ಣವಾಗಿ ದಾಖಲಿಸಿ ಸಹಿ ಮಾಡಿರಬೇಕು. ಅಪೂರ್ಣ ಹಾಗೂ ಲೋಪದೋಷಿತ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಯಶಸ್ವಿ ಬಿಡ್ಡುದಾರರು ಇಲಾಖೆಯೊಂದಿಗೆ ಇಲಾಖೆಯ ನಿಯಮಗಳನ್ನೊಳಗೊಂಡ ಕರಾರು ಪತ್ರವನ್ನು ಸಹಿ ಹಾಕಿ ಕರಾರು ಮಾಡಿಕೊಳ್ಳಬೇಕು ಮತ್ತು ಅದಕ್ಕೆ ಬದ್ಧರಾಗಿರಬೇಕು.
7. ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ 10 ದಿನದೊಳಗಾಗಿ ಉಳಿದ ಶೇ.50ರ ಮೊತ್ತವನ್ನು ಕ್ರಾಸ್ ಡಿ.ಡಿ. ಮೂಲಕ ಪಾವತಿಸಬೇಕು.
8. ಫಸಲಿನ ಕಾವಲು ಕಟ್ಟಳೆಗಳನ್ನು ಸಫಲ ಟೆಂಡರ್‌ದಾರರೆ ನೋಡಿಕೊಳ್ಳತಕ್ಕದ್ದು.
9. ಫಸಲನ್ನು ಕಟಾವು ಮಾಡಿಕೊಳ್ಳುವ ಅವಧಿಗೆ ಕಟಾವು ಸೀಮಿತಗೊಳಿಸಬೇಕು. ಬಲಿತ ಕಾಯಿಗಳನ್ನು ಮಾತ್ರ ಕೊಯಿಲು ಮಾಡಲು ಅವಕಾಶವಿರುತ್ತದೆ.
10. ಫಸಲು ಯಾವುದೇ ಪ್ರಕೃತಿ ವಿಕೋಪಕ್ಕೆ ಹಾನಿಯಾದರೆ ಇಲಾಖೆಯು ಜವಾಬ್ದಾರಿಯಲ್ಲ. ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಹಣ ಹಿಂದಿರುಗಿಸಲಾಗುವುದಿಲ್ಲ.
11. ಫಸಲು ವೀಕ್ಷಿಸಲು ಇಷ್ಟವುಳ್ಳವರು ಕಛೇರಿಯ ವೇಳೆಯಲ್ಲಿ ಸಂಬಂಧಿಸಿದ ಕ್ಷೇತ್ರದ ಅಧಿಕಾರಿಗಳನ್ನು ಕಂಡು ಮಾಹಿತಿ ಪಡೆಯಬಹುದು.
12. ಟೆಂಡರ್‌ದಾರರು ಇಲಾಖೆಯ ಎಲ್ಲ ನಿಬಂಧನೆಗಳಿಗೆ ಬದ್ದರಾಗಿರಬೇಕು. ಒಂದು ವೇಳೆ ಯಾವುದೇ ನಿಯಮ ಉಲ್ಲಂಘಿಸಿದರೆ ಠೇವಣಿ ಹಣ ಮತ್ತು ಶೇ.50ರ ಮೊತ್ತವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
13. ಫಸಲಿಗೆ ಯೋಗ್ಯ ಬೆಲೆ ಬಾರದಿದ್ದಲ್ಲಿ ಕಟಾವಿಗೆ ಅನುಮತಿ ನೀಡುವುದು/ ತಿರಸ್ಕರಿಸುವುದು ಇಲಾಖೆಯ ಸಕ್ಷಮ ಪ್ರಾಧಿಕಾರಕ್ಕೆ ಸೇರಿರುತ್ತದೆ.
14. ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆವುಳ್ಳವರು ಇಲಾಖಾ ಕಛೇರಿಗಳಿಗೆ ಭೇಟಿ ಮಾಡಿ ಸಂಪೂರ್ಣ ಮಾಹಿತಿ ಪಡೆದುಕೊಳ್ಳಬೇಕು.
15. ಹೆಚ್ಚಿನ ಮಾಹಿತಿಗಾಗಿ ಕಛೇರಿ ಅಧಿಕಾರಿಗಳನ್ನು ಭೇಟಿಯಾಗುವುದು.

ತೋಟಗಾರಿಕೆ ಉಪ ನಿರ್ದೇಶಕರು,
ಗಾಂಧಿ ಪಾರ್ಕ್, ಶಿವಮೊಗ್ಗ.

ಪಿ.ಆರ್. 60

## ಲೋಕೋಪಯೋಗಿ ಇಲಾಖೆ

## ಮುಖ್ಯ ಇಂಜಿನಿಯರ್‌ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು

## ಟೆಂಡರ್ ಕಂ ಹರಾಜು ಪ್ರಕಟಣೆ

**ನಂ. ಮುಇಂ: ಸಂಕದ: ಉಗ್ರಾಣ:ಆಪೀವಿ.06-07, ದಿನಾಂಕ:2ನೇ ಫೆಬ್ರವರಿ, 2007**

**ವಿಷಯ:** ಅನುಪಯುಕ್ತ ಪೀಠೋಪಕರಣಗಳ ವಿಲೇವಾರಿಗಾಗಿ ಟೆಂಡರ್-ಕಂ-ಬಹಿರಂಗ ಹರಾಜು ಪ್ರಕಟಣೆ.

ಈ ಮೂಲಕ ಸಾರ್ವಜನಿಕರಿಗೆ ಪ್ರಕಟಿಸುವುದೇನೆಂದರೆ ಈ ಕಛೇರಿಯಲ್ಲಿರುವ ಅನುಪಯುಕ್ತ ಪೀಠೋಪಕರಣಗಳನ್ನು ಟೆಂಡರ್-ಕಂ- ಬಹಿರಂಗ ಹರಾಜು ಮೂಲಕ ಕೆಳಕಂಡ ಷರತ್ತುಗಳಿಗೊಳಪಟ್ಟು ವಿಲೇವಾರಿ ಮಾಡಲಾಗುವುದು. ಅನುಪಯುಕ್ತ ಸಾಮಗ್ರಿಗಳ ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ. | ಹರಾಜಿನಲ್ಲಿಟ್ಟ ವಸ್ತುಗಳು | ಸಂಖ್ಯೆ |
|---|---|---|
| 1. | ತೇಗದ ಮರದ ಟೇಬಲ್‌ಗಳು | 40 |
| 2. | ಟೈಪಿಸ್ಟ್ ಟೇಬಲ್‌ಗಳು | 20 |
| 3. | ತೇಗದ ಮರದ ಕುರ್ಚಿಗಳು | 30 |
| 4. | ಟೈಪಿಂಗ್ ಕುರ್ಚಿಗಳು (ಪುರದ್ದು) | 14 |
| 5. | ರಿವಾಲ್ವಿಂಗ್ ಕುರ್ಚಿಗಳು | 5 |
| 6. | ಎಸ್ ಮಾದರಿ ಕುರ್ಚಿಗಳು | 4 |
| 7. | ಮರದ ಸ್ಟೂಲ್‌ಗಳು | 15 |
| 8. | ಮರದ ಬೀರುಗಳು (ದೊಡ್ಡವು) | 5 |
| 9. | ಮರದ ಬೀರುಗಳು (ಚಿಕ್ಕವು) | 2 |
| 10. | ಸ್ಟೀಲ್ ರ್‍ಯಾಕ್‌ಗಳು ದೊಡ್ಡವು | 110 |
| 11. | ಮರದ ರ್‍ಯಾಕ್‌ಗಳು ದೊಡ್ಡವು | 10 |
| 12. | ಮರದ ಸೈಡ್ ರ್‍ಯಾಕ್‌ಗಳು | 17 |
| 13. | ಸ್ಟೀಲ್ ಸೈಡ್ ರ್‍ಯಾಕ್‌ಗಳು | 4 |
| 14. | ಸ್ಟೀಲ್ ಟ್ರೇಗಳು | 50 |
| 15. | ಪಿಜನ್ ಹೋಲ್‌ಗಳು | 3 |
| 16. | ಸ್ಟೀಲ್ ವೇಸ್ಟ್ ಪೇಪರ್ ಬ್ಯಾಸ್ಕೆಟ್‌ಗಳು | 17 |
| 17. | ಇಂಗ್ಲೀಷ್ ಬೆರಳಚ್ಚು ಯಂತ್ರ | 10 |
| 18. | ಕನ್ನಡ ಬೆರಳಚ್ಚು ಯಂತ್ರ | 1 |
| 19. | ತೂಕದ ಯಂತ್ರ ಚಿಕ್ಕದ್ದು | 2 |
| 20. | ಪ್ಯಾಸಿಶ್ ಕ್ಯಾಲುಕುಲೇಟರ್ | 3 |
| 21. | ವಾಟರ್ ಫಿಲ್ಟರ್ | 1 |
| 22. | ತೂಕದ ಯಂತ್ರ ದೊಡ್ಡದು | 1 |
| 23. | ಎಮರ್ಜನ್ಸಿ ಲೈಟ್‌ಗಳು | 2 |
| 24. | ಸೋಫಾ ದೊಡ್ಡದು | 1 |
| 25. | ಸೋಫಾ ಚಿಕ್ಕದು | 1 |
| 26. | ಸೋಫಾ ಬೆಂಚ್‌ಗಳು | 3 |
| 27. | ಕಬ್ಬಿಣದ ಏಣಿಗಳು | 2 |
| 28. | ಕೋಟ್ ಸ್ಟ್ಯಾಂಡ್ | 2 |
| 29. | ವಾಟರ್ ಕೂಲರ್‌ಗಳು ದೊಡ್ಡವು | 2 |
| 30. | ಸ್ಟೀಲ್ ರ್‍ಯಾಕ್ ಡಬಲ್ | 6 |

**ಷರತ್ತುಗಳು:**

1. ಅನುಪಯುಕ್ತ ಸಾಮಗ್ರಿಗಳನ್ನು **"ಎಲ್ಲಿ ಹೇಗಿವೆಯೋ ಅದೇ ಸ್ಥಿತಿಯಲ್ಲಿ"** ವಿಲೇವಾರಿ ಮಾಡಲಾಗುವುದು. ಇಚ್ಛಿತ ಬಿಡ್ಡುದಾರರು ಸಾಮಗ್ರಿಗಳನ್ನು ಕಛೇರಿ, ವೇಳೆಯಲ್ಲಿ ಪರೀಕ್ಷಿಸಬಹುದು.
2. ಖಾಲಿ ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 23.02.2007 ರಿಂದ 24.02.2007ರ ವರೆಗೆ ಟೆಂಡರ್ ಫಾರಂ ಬೆಲೆ ಸೆಟ್ 1ಕ್ಕೆ 200-00 ರೂ.ಗಳನ್ನು ಪಾವತಿಸಿ ಪಡೆದುಕೊಳ್ಳಬಹುದು.
3. ಈ ಕಛೇರಿಯಿಂದ ಪಡೆದ ಟೆಂಡರ್ ಫಾರಂಗಳನ್ನು ದ್ವಿಪ್ರತಿಗಳಲ್ಲಿ ಭರ್ತಿ ಮಾಡಿ ಸೀಲು ಮಾಡಿದ ಲಕೋಟೆಯಲ್ಲಿ ದಿನಾಂಕ:26.02.2007 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸುವುದು. ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
4. ಭರ್ತಿ ಮಾಡಿದ ಟೆಂಡರ್ ಫಾರಂ ಜೊತೆಯಲ್ಲಿ ಕಾರ್ಯಪಾಲಕ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರ ಹೆಸರಿನಲ್ಲಿ ಪಡೆದ ರೂ.2000.00 (ರೂ. ಎರಡು ಸಾವಿರಗಳ) ಡಿ.ಡಿ.ಯನ್ನು ಠೇವಣಿಯಾಗಿ ಸಲ್ಲಿಸುವುದು. ಠೇವಣಿ ಇಲ್ಲದೆ ಸಲ್ಲಿಸುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

5. ದಿನಾಂಕ:27.02.2007 ರಂದು ಮಧ್ಯಾಹ್ನ 12.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಬಹಿರಂಗ ಹರಾಜು ಮಾಡಲಾಗುವುದು. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು (ಟೆಂಡರ್‌ದಾರರು) ಸೇರಿದಂತೆ ಇ.ಎಂ.ಡಿ. ಮೊತ್ತವಾದ ರೂ.5000.00 ಗಳನ್ನು ಮುಂಗಡವಾಗಿ ಪಾವತಿ ಮಾಡಿ ಬಿಡ್‌ನಲ್ಲಿ ಭಾಗವಹಿಸಬಹುದು.
6. ಹರಾಜಿನ ನಂತರ ಟೆಂಡರ್‌ಗಳನ್ನು ತೆರೆಯಲಾಗುವುದು. ಗರಿಷ್ಠ ಮೊಬಲಗಿನ ಟೆಂಡರ್ ಅಥವಾ ಬಿಡ್‌ನ್ನು ಅಂಗೀಕರಿಸಲಾಗುವುದು. ಅಂಗೀಕೃತ ಟೆಂಡರ್: ಬಿಡ್‌ದಾರರ ವಿನಹಃ ಇತರೆಯವರ ಠೇವಣಿಯನ್ನು ಹಿಂದಿರುಗಿಸಲಾಗುವುದು.
7. ಉತ್ತೀರ್ಣ ಟೆಂಡರ್‌ದಾರರ: ಬಿಡ್ಡುದಾರರು ಟೆಂಡರ್: ಬಿಡ್ ಅಂಗೀಕೃತವಾದ ನಂತರ ಟೆಂಡರ್: ಬಿಡ್ಡಿನ ಮೊಬಲಗನ್ನು ಮಾರಾಟ ತೆರಿಗೆ ಸಮೇತ ಪಾವತಿ ಮಾಡಿ ಸಾಮಗ್ರಿಗಳನ್ನು ಪಡೆದುಕೊಳ್ಳುವುದು. ತಪ್ಪಿದ್ದಲ್ಲಿ ಅವರ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಂಡು ಸೂಕ್ತಕ್ರಮ ಜರುಗಿಸಲಾಗುವುದು.
8. ಉತ್ತೀರ್ಣ ಟೆಂಡರ್‌ದಾರ: ಬಿಡ್ಡುದಾರರು ಪೂರ್ತಾಹಣ ಪಾವತಿಸಿದ ನಂತರ ಹರಾಜು ಮಾಡಿದ ಸಾಮಗ್ರಿಗಳನ್ನು ಪಡೆದುಕೊಳ್ಳುವುದು.
9. ಯಾವುದೇ ಕಾರಣವನ್ನು ನೀಡದೇ ಟೆಂಡರ್: ಬಿಡ್ಡನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಮುಖ್ಯ ಇಂಜಿನಿಯರ್‌ರವರಿಗಿರುತ್ತದೆ.

ಮುಖ್ಯ ಇಂಜಿನಿಯರ್,
ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ),
ಬೆಂಗಳೂರು.

ಪಿ.ಆರ್.61

## ಕಾರಾಗೃಹಗಳ ಉಪ ಮಹಾನಿರೀಕ್ಷಕರವರ ಕಛೇರಿ, ಕೇಂದ್ರ ಕಾರಾಗೃಹ, ಬೆಂಗಳೂರು-100

### ಪ್ರಕಟಣೆ

### ಸಂಖ್ಯೆ: ಕೇಕಾಬೆಂ/ ಕಾವಿ/ ಅಂಗಡಿಮಳಿಗೆ/ 69/ 2006-07, ದಿನಾಂಕ:22ನೇ ಜನವರಿ, 2007

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಚಯದಲ್ಲಿನ ಅಂಗಡಿ ಮಳಿಗೆಗಳಿಗೆ ಬಹಿರಂಗ ಹರಾಜು ಮೂಲಕ ಸ್ಪರ್ಧಾತ್ಮಕ ದರಗಳನ್ನು ಕರೆದು 2007-08ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ನೀಡುವ ಬಹಿರಂಗ ಹರಾಜನ್ನು ದಿನಾಂಕ:28.02.2007 ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 4400ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 600 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮುಚ್ಚಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿ ಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ, ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

ಅಂಗಡಿ ಮಳಿಗೆಗಳು ತಿಂಗಳ ಬಾಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ವಾಣಿಜ್ಯ ಮಳಿಗೆಯ ಹೆಸರು/ ಕ್ರಮಸಂಖ್ಯೆ | ವಿಸ್ತೀರ್ಣ ಚ.ಅಡಿಗಳಲ್ಲಿ | ಅವಧಿ | ಮಾಸಿಕ ಬಾಡಿಗೆ ಶುಲ್ಕ | 10 ತಿಂಗಳ ಬಾಡಿಗೆಯನ್ನು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುಪು ಠೇವಣಿ |
|---|---|---|---|---|---|---|
| 1. | ಬೇಕರಿ-03 | (6.85x6) (2 ಯೂನಿಟ್) | 11 ತಿಂಗಳು | 1960/- | ನಿಗದಿಯಾದ ಬಾಡಿಗೆಯ 10 ತಿಂಗಳ ಮೊತ್ತವನ್ನು ಠೇವಣಿಯಾಗಿ ಇಡುವುದು. | 2,000/- |
| 2. | ಹಿಟ್ಟಿನ ಗಿರಣಿ-11 | (3.25x6) (1 ಯೂನಿಟ್) | 11 ತಿಂಗಳು | 980/- | | 1,000/- |
| 3. | ದಿನಸಿ ಅಂಗಡಿ-05 | (6.85x6) (2 ಯೂನಿಟ್) | 11 ತಿಂಗಳು | 1960/- | | 2,000/- |
| 4. | ವರ್ಕ್‌ಶಾಪ್-10 | (3.25x6) (1 ಯೂನಿಟ್) | 11 ತಿಂಗಳು | 980/- | | 1,000/- |
| 5. | ಸಲೂನ್-01 | (3.25x6) (1 ಯೂನಿಟ್) | 11 ತಿಂಗಳು | 980/- | | 1,000/- |

ಹೆಚ್ಚಿನ ಮಾಹಿತಿಗಳು ಮತ್ತು ನಿಬಂಧನೆಗಳು ವಿವರಗಳು ಬೇಕಾಗಿದ್ದಲ್ಲಿ ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು ಇವರಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಕಾರಾಗೃಹಗಳ ಉಪ ಮಹಾನಿರೀಕ್ಷಕರು,
ಕೇಂದ್ರ ಕಾರಾಗೃಹ, ಬೆಂಗಳೂರು.

ಪಿ.ಆರ್.62

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಲಾಲ್‌ಬಾಗ್ ಸಸ್ಯತೋಟ, ಬೆಂಗಳೂರು

### ಟೆಂಡರ್ ಪ್ರಕಟಣೆ

### ಸಂಖ್ಯೆ: ತೋಉನಿ/ ಲಾಸತೋ/ ಬಿಜಿಟಿ/ ವಿನಿ1/ 85/ 2005-06, ಬೆಂಗಳೂರು, ದಿನಾಂಕ:29ನೇ ಜನವರಿ, 2007

ಲಾಲ್‌ಬಾಗ್ ಸಸ್ಯತೋಟದ ಡಾ।। ಎಂ.ಹೆಚ್. ಮರಿಗೌಡ ಗ್ರಂಥಾಲಯದ ಬಳಿ ಕಾಬೂಲ್ ಸ್ಟೋನ್‌ಗಳನ್ನು ಅಳವಡಿಸಲು ಅಗತ್ಯವಿರುವ 60mm ದಪ್ಪದ ಗಟ್ಟಿ ಸಾಮರ್ಥ್ಯದ ಕಾಬೂಲ್ ಸ್ಟೋನ್‌ಗಳ ಸರಬರಾಜು ಮತ್ತು ಅಳವಡಿಸುವುದು ಹಾಗೂ 1:2:4 ಕಾಂಕ್ರೀಟ್ ತಯಾರಿಕೆಯ 45x20x20 ಸೆಂ.ಮೀ. ಅಳತೆಯ ಕರ್ಬ್ ಸ್ಟೋನ್‌ಗಳ ಸರಬರಾಜು ಮತ್ತು ಅಳವಡಿಸುವ ಕಾಮಗಾರಿ ಹಾಗೂ ರಸ್ತೆಗೆ ಜಲ್ಲಿಕಲ್ಲು ಮಿಶ್ರಣ ಹಾಕಿ ಬಿಗಿಪಡಿಸುವ ಕಾರ್ಯಕ್ಕಾಗಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿ ಸರಬರಾಜುದಾರರು 1 ಚ.ಮೀ. ಕಾಬೂಲ್ ಸ್ಟೋನ್‌ನ ದರ ಮತ್ತು ಪ್ರತಿ ಕರ್ಬ್‌ಸ್ಟೋನ್‌ಗೆ ದರವನ್ನು ಅಳವಡಿಸುವ ವೆಚ್ಚವನ್ನು ಸೇರಿ ಪ್ರತ್ಯೇಕವಾಗಿ ನಮೂದಿಸಿ, ಟೆಂಡರ್‌ಗಳನ್ನು ಸಲ್ಲಿಸುವುದು. ಅಗತ್ಯ ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ

ದಿನಾಂಕ:09.02.2007 ರಿಂದ 23.02.2007 ರವರೆಗೆ ರೂ.500/- ಗಳನ್ನು ಪಾವತಿಸಿ ಪಡೆಯುವುದು. ಭರ್ತಿ ಮಾಡಿದ ಟೆಂಡರ್‌ಗಳನ್ನು ದಿನಾಂಕ:24.02.2007ರ ಮಧ್ಯಾಹ್ನ 2.00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸುವುದು. ಟೆಂಡರ್ ಜೊತೆಯಲ್ಲಿ ರೂ.20,000/- ಗಳ ಇ.ಎಂ.ಡಿ. ಮೊತ್ತದ ಬ್ಯಾಂಕ್ ಹುಂಡಿಯನ್ನು ಬೆಂಗಳೂರು ಗಾರ್ಡನ್ ಟ್ರಸ್ಟ್, ಬೆಂಗಳೂರು ರವರ ಹೆಸರಿನಲ್ಲಿ ಸಲ್ಲಿಸುವುದು. ಟೆಂಡರ್‌ಗಳನ್ನು ದಿನಾಂಕ:24.02.2007ರ ಸಂಜೆ 3.00 ಗಂಟೆಗೆ ತೆರೆಯಲಾಗುವುದು. ಟೆಂಡರ್‌ಗಳನ್ನು ಪುರಸ್ಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವು ಕೆಳಸಹಿದಾರರಿಗೆ ಇರುತ್ತದೆ. ಷರತ್ತು ಮತ್ತು ನಿಬಂಧನೆಗಳು, ತಾಂತ್ರಿಕ ವಿವರಗಳು ಹಾಗೂ ಹೆಚ್ಚಿನ ವಿವರಗಳನ್ನು ಕೆಳಸಹಿದಾರರ ಕಛೇರಿಯಲ್ಲಿ ಪಡೆದು ಅದಕ್ಕನುಸಾರವಾಗಿ ಟೆಂಡರ್‌ಗಳನ್ನು ಸಲ್ಲಿಸುವುದು.

ತೋಟಗಾರಿಕೆ ಉಪ ನಿರ್ದೇಶಕರು,
ಲಾಲ್‌ಬಾಗ್ ಸಸ್ಯತೋಟ.

ಪಿ.ಆರ್.64

## ಜಿಲ್ಲಾ ಪೊಲೀಸ್ ಕಛೇರಿ, ತುಮಕೂರು

### ಅಧಿಸೂಚನೆ

### ಸಂಖ್ಯೆ: ಲೆಕ್ಕ (2) ಎಂಟಿ/ 5/ 2006-2007, ದಿನಾಂಕ:5ನೇ ಫೆಬ್ರವರಿ, 2007

**ವಿಷಯ:** ಈ ಘಟಕದ ನಿರುಪಯುಕ್ತಗೊಳಿಸಿದ ವಾಹನಗಳನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ/6/ ಟಿಸಿಇ/ 1987 ದಿನಾಂಕ:15.12.1992.

2) ಪ್ರಧಾನ ಕಛೇರಿ ಆದೇಶ ಸಂಖ್ಯೆ: ವಾಸಾ(1) 11/ 06-07 ದಿನಾಂಕ:30.05.2006 ಮತ್ತು 19.09.2006.

ಮೇಲಿನ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖ (2)ರ ಆದೇಶದಲ್ಲಿ ನಿರುಪಯುಕ್ತಗೊಳಿಸಿದ ತುಮಕೂರು ಜಿಲ್ಲಾ ಪೊಲೀಸ್ ಇಲಾಖೆಯ ಈ ಕೆಳಕಂಡ ವಾಹನಗಳನ್ನು ತುಮಕೂರಿನ ಬಟವಾಡಿಯಲ್ಲಿರುವ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿ ಆವರಣದಲ್ಲಿ **ದಿನಾಂಕ:28.03.2007 ರಂದು ಬೆಳಿಗ್ಗೆ 11.00 ಗಂಟೆಗೆ** ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದ್ದರಿಂದ ಇಚ್ಛೆಯುಳ್ಳವರು ಸದರಿ ಹರಾಜಿನಲ್ಲಿ ಭಾಗವಹಿಸಿ ವಾಹನಗಳನ್ನು ಖರೀದಿಸಬಹುದಾಗಿದೆ.

**ಹರಾಜು ವಾಹನಗಳ ವಿವರಗಳು**

| ಕ್ರ. ಸಂ. | ವಾಹನ ನೋಂದಣಿ ಸಂಖ್ಯೆ | ಮಾದರಿ | ತಯಾರಿಕಾ ವರ್ಷ |
|---|---|---|---|
| 1. | ಕೆಎ-06 ಜಿ-27 | ಮಹೀಂದ್ರಾ ಜೀಪ್ | 1991 |
| 2. | ಕೆಎ-06-ಜಿ-23 | ಮಹೀಂದ್ರಾ ಜೀಪ್ | 1991 |
| 3. | ಕೆಎ-06-ಜಿ-22 | ಮಹೀಂದ್ರಾ ಜೀಪ್ | 1991 |

ಈ ಮೇಲ್ಕಂಡ ವಾಹನಗಳನ್ನು ಖರೀದಿಸಲು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರಬೇಕಾಗಿರುತ್ತದೆ.

**ಟೆಂಡರ್/ ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ಡ್ ಕವರ್) ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ಪೊಲೀಸ್ ವಾಹನದ ಖರೀದಿ ಬಗ್ಗೆ ಎಂದು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್‌ದಾರರು/ ಬಿಡ್‌ದಾರರು ಪ್ರತಿ ವಾಹನದ ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ ರೂ.2000.00 ಗಳನ್ನು ಡಿ.ಡಿ. ಅಥವಾ ನಗದು ರೂಪದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಹೆಸರಿನಲ್ಲಿ ಪಾವತಿ ಮಾಡಿ ಅರ್ಜಿಯನ್ನು ಸಲ್ಲಿಸಬೇಕು. ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೆ ಕಳುಹಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ಪೂರ್ಣ ಸಹಿಯೊಂದಿಗೆ ದೃಢೀಕರಿಸಿರಬೇಕು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಟೆಂಡರ್‌ಗಳನ್ನು **ದಿನಾಂಕ:26.03.2007 ರಂದು ಸಂಜೆ 5.00 ಗಂಟೆಯ** ಒಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ದಾರರು ಸಹ ಹೆಚ್ಚಿನ ಭದ್ರತಾ ಠೇವಣಿ ಹಣವಿಲ್ಲದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
7. ಜಿಲ್ಲಾ ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿ ತುಂಬಿದ ಟೆಂಡರ್/ ಸವಾಲುದಾರರು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲು ಮಾಡಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮದಲ್ಲಿ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಯಾರು ಹೆಚ್ಚಿನ ಬೆಲೆಯನ್ನು ನೀಡಿರುತ್ತಾರೋ ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್/ ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡಾ 25ರಷ್ಟು ಹಣವನ್ನು ಸ್ಥಳದಲ್ಲಿಯೇ ಕಟ್ಟಬೇಕು. ಉಳಿದ ಹಣವನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ಅನುಮೋದಿಸಿದ ನಂತರ ಪಾವತಿ ಮಾಡಿ ಒಂದು ತಿಂಗಳೊಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ತೆಗೆದುಕೊಂಡು ಹೋಗಬೇಕು. ತಪ್ಪಿದರೆ ಮುಂಗಡವಾಗಿ ಕಟ್ಟಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಪೂರ್ಣ ಮೊತ್ತವನ್ನು ತುಮಕೂರು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಗದಾಗಿ ಪಾವತಿಮಾಡಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜಿನಲ್ಲಿ ಭಾಗವಹಿಸಿದ ಟೆಂಡರ್/ ಸವಾಲುದಾರರು ಹರಾಜು ಮುಗಿದ ನಂತರ ಹರಾಜಿನಲ್ಲಿ ಯಶಸ್ವಿಯಾದವರು ಮತ್ತು ಯಶಸ್ವಿಯಾಗದವರು ಸರ್ಕಾರಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

12. ಹರಾಜು ಮಾಡಲಾದ ವಾಹನದ ಮೌಲ್ಯಕ್ಕೆ ನಿಯಮಾನುಸಾರ ವಾಹನವನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರದ ಪ್ರಕಾರ ತೆರಿಗೆ ಮತ್ತು ಸೆಸ್‌ಗಳನ್ನು ಸಹ ಪಾವತಿ ಮಾಡಬೇಕು.
13. ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರ ತಪ್ಪು ಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ, ಅಂತಹ ಟೆಂಡರ್/ ಸವಾಲುದಾರರು ಮುಂಗಡವಾಗಿ ಕಟ್ಟಿಡಲಾದ (ಇ.ಎಂ.ಡಿ.) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನುಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.
14. ಹರಾಜಿನ ಯಾವುದೇ ಟೆಂಡರ್/ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ/ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.
15. ಮೇಲ್ಕಂಡ ಟೆಂಡರ್ / ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ, ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
16. ಹರಾಜು ಮಾಡಲಿರುವ ನಿರುಪಯುಕ್ತ ವಾಹನಗಳನ್ನು ತುಮಕೂರಿನ ಬಟವಾಡಿಯಲ್ಲಿರುವ ಸಶಸ್ತ್ರ ಮೀಸಲು ಪಡೆ ಕಛೇರಿ ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಛೆಯುಳ್ಳವರು ಕಛೇರಿ ವೇಳೆಯಲ್ಲಿ ಡಿವೈ.ಎಸ್.ಪಿ., ಡಿ.ಎ.ಆರ್., ತುಮಕೂರು ರವರನ್ನು ಸಂಪರ್ಕಿಸಿ ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಕೊಳ್ಳಬಹುದು.

**ಟೆಂಡರ್ ಫಾರಂ ನಮೂನೆ**

**ನಿರುಪಯುಕ್ತ ವಾಹನಗಳಿಗೆ ಟೆಂಡರ್**

ಗೆ: ಪೊಲೀಸ್ ಅಧೀಕ್ಷಕರು,
ತುಮಕೂರು ಜಿಲ್ಲೆ, ತುಮಕೂರು.

ಮಾನ್ಯರೆ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ: ಲೆಕ್ಕ(2) ಎಂಟಿ/5/ 2006-2007 ದಿನಾಂಕ:05.02.2007ರಲ್ಲಿ ತಿಳಿಸಿದ ನಿರುಪಯುಕ್ತ ವಾಹನಗಳನ್ನು ರೂ................(ರೂಪಾಯಿ............................)ಗಳಿಗೆ ಖರೀದಿಸಲು ಒಪ್ಪಿರುತ್ತೇನೆ.

ತಮ್ಮ ವಿಶ್ವಾಸಿ,

ಸ್ಥಳ:
ದಿನಾಂಕ: (ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

ಪೊಲೀಸ್ ಅಧೀಕ್ಷಕರು,
ಪಿ.ಆರ್. 65 ತುಮಕೂರು ಜಿಲ್ಲೆ, ತುಮಕೂರು.

**FORM- IV (See Rule-12)**
**NOTICE Dated:25th October, 2006**

It is hereby notified that the undersigned has changed his name from **M. KUPPAN** to **M. KUPPANNA.**

PD-23 **M. KUPPAN**

**IN THE COURT OF THE IV ADDL CITY CIVIL JUDGE, MAYOHALL, BANGALORE**
**G. & W.C. 25001/ 2007**

**Petitioners:**

1) G. Vyshnavi Shree D/o Late Govinda Ram @ K.Gopi.
2) Master Vishal Shrudeep S/o Late Govinda Ram @ K.Gopi.
3) Smt. G. Chitralekha W/o Late Govinda Ram @ K.Gopi.

All are Residence at No.114/ 2, 4th Cross, Shanthi Colony, Anna Nagar, Chennai-600 040.

**V/s**

**Respondents:** -Nil-

**PUBLIC NOTICE**

Notice is hereby given that a petition has been made to this Court U/s 7 & 29 of the Guardian and Wards Act, and Prays (to appoint petitioner No.3 to act on guardian for petitioner 1 and 2) guardianship certificate and to alienate property for the benefits of the minors petitioner 1 and 2.

The above petition stands posted for hearing on 23.02.2007 and any person claiming to have any interest may come and participate in the proceedings before grant of Guardianship Cetificate and to alienate property.

**PROPERTY**

(A) Undivided 0.311% share i.e., 913 Sq.ft. of converted land in Khatha No.135/56/2 carved out of Sy.No.56/2, of Haralakunte Village, Begur Hobli, Bangalore South Taluk.

(B) A three bedroom apartment bearing No.K101 Ist floor in 'K, Block in building PURVA FARIMONT constructed in schedule 'A' property with Car parking space.

Given under my hand and seal of this Court Dated 9th day of February 2007.

By order of the Court,
Assistant Registrar, City Civil Court,
Mayohall Unit, Bangalore.

PD-15